# ಮಾನಸಿ

Jan 92

ತಿಂಗಳ ಪತ್ರಿಕೆ. ಜನವರಿ ೧೯೯೨

" ಕಳೆದು ಹೋಗಿದ್ದಾನೆ ಮನುಷ್ಯ "
ಒಂದು ಅವಲೋಕನ

ಕನಸುಗಳ ಕಟ್ಟಬೇಡ

ಸಮತಾ

ಬಿ. ಟಿ. ಎಸ್. ನಲ್ಲಿ ಮೀಸಲಾತಿ
ಮತ್ತು ಸ್ತ್ರೀಯರು

# ಮಾನಸ

ಸಂಪುಟ: ೫ ಸಂಚಿಕೆ:೧

ಜನವರಿ ೧೯೯೩

ಸಂಪಾದಕೀಯ ಮಂಡಳಿ:
ರಾಜೇಶ್ವರಿ ಎಚ್. ಎಸ್.,
ಚಂಪಾವತಿ ಎಚ್. ಎಸ್., ದು. ಸರಸ್ವತಿ,
ಸವಿತ ಎ., ಗೀತಾ ಜಿ. ಎಸ್., ಗಾಯಿತ್ರಿ ವಿ.

ಸಲಹೆ—ಸಹಕಾರ
ಇಳಾ ವಿಜಯ

ವಿಳಾಸ "ಮಾನಸ ತಿಂಗಳ ಪತ್ರಿಕೆ"
ಪಂಚಾಯಿತಿ ರಸ್ತೆ
ಕಾಡುಗೋಡಿ (ಪೊ)
ಬೆಂಗಳೂರು—560067

ಬಿಡಿಪ್ರತಿ:2 ರೂ.
ಸೂಚನೆ: ವಾರ್ಷಿಕ ಚಂದಾ:20ರೂ.
ಆಜೀವ ಚಂದಾ: 250ರೂ.
ಒಂದು ವಿಶೇಷ ಸಂಚಿಕೆಯೊಂದಿಗೆ
ಒಟ್ಟು ಹನ್ನೊಂದು ಸಂಚಿಕೆಗಳು.
ಹಣವನ್ನು ಬ್ಯಾಂಕ್ ಡ್ರಾಫ್ಟ್, ಎಂ. ಓ.
ಮೂಲಕ ಸ್ವೀಕರಿಸಲಾಗುವುದು.


ಈ ಸಂಚಿಕೆಯಲ್ಲಿ..........



# ಸಂಪಾದಕೀಯ

ವಿಧಾನ ಮಂಡಲದಲ್ಲಿ ಗಲಭೆ ಗದ್ದಲಗಳ ಮಧ್ಯೆ ಮಹಿಳೆಯರಿಗೆ ಆಟೋ ಚಾಲನೆಗೆ ಅವಕಾಶ ಹಾಗೂ ತರಬೇತಿ ಕೊಡಬೇಕು ಎಂಬುದಾಗಿ ಸಾವಿತ್ರಿ ಗಡಿಬಂಡಿಯರು ಧ್ವನಿ ಎತ್ತಿದ್ದಾರೆ. ಈ ಹಿನ್ನಲೆಯಲ್ಲಿ ಮಹಿಳೆಯರಿಗೆ ಆಟೋ ಚಾಲನೆಗೆ ಅವಕಾಶ ಕೊಡುವುದು ಎಷ್ಟರ ಮಟ್ಟಿಗೆ ಸೂಕ್ತ ಎಂಬ ಪ್ರಶ್ನೆಗಳು ಎದ್ದಿವೆ. ಈ ಹಂತದಲ್ಲಿ ಆಟೋ ಡ್ರೈವರ್ಸ್ ಆಗಲು ಮಹಿಳೆಯರಿಗೆ ಅವಕಾಶ ಕಲ್ಪಿಸಿ ಕೊಟ್ಟರೆ ಒಳ್ಳೆಯದು ಎಂಬ ಸಲಹೆಗಳು ಬಂದಿವೆ. ಮಹಿಳೆಯರ ಸಂರಕ್ಷಣೆಯ ಬಗ್ಗೆಗಿನ ಕಾಳಜಿಯೇ ಈ ರೀತಿಯ ಪ್ರಶ್ನೆ–ಉತ್ತರಗಳಿಗೆ ಕಾರಣವಾಗಿದೆ.

ಪ್ರಪಂಚದ ಎಲ್ಲಾ ಭಾಗಗಳಲ್ಲಿ ಸ್ಪರ್ಧಾತ್ಮಕ ಉದ್ಯೋಗ ರಂಗಗಳಲ್ಲೆಲ್ಲಾ ಮಹಿಳೆಯರು ಪ್ರವೇಶ ಪಡೆಯುತ್ತಿರುವಾಗ ಜೊತೆಗೆ ಹೆಚ್ಚುತ್ತಿರುವ ಆರ್ಥಿಕ ದುಸ್ಥಿತಿಗಳಲ್ಲಿ ಕಷ್ಟಕರ ಎನ್ನಬಹುದಾದ ಉದ್ಯೋಗಕ್ಕೂ ಇಂದು ಭಾರತದಂತಹ ಮೂರನೇ ಜಗತ್ತಿನಲ್ಲಿ ಮಹಿಳೆಯರು ಮನಸ್ಸು ಮಾಡಿ ಮುಂದೆ ಬರುತ್ತಿದ್ದಾರೆ. ಈ ತರಹದ ಪ್ರಯತ್ನಗಳನ್ನು ಸಂರಕ್ಷಣೆಯ ಕಾರಣದಿಂದಾಗಿಯೇ ತುಳಿದು ಹಾಕುವುದು ಸಾಧ್ಯವಾಗುವುದಿಲ್ಲ. ಭಯ | ಆತಂಕಗಳನ್ನು ಮೀರಿ ಮಹಿಳೆಯರು ಇಂತಹ ಉದ್ಯೋಗ ರಂಗಗಳನ್ನು ಆಯ್ದುಕೊಳ್ಳಲು ಮುಂದೆ ಬರುತ್ತಿದ್ದಾರೆಂಬುದೇ ಅತ್ಯಂತ ಸ್ವಾಗತಾರ್ಹ ಸಂಗತಿ. ಇದು ಅವರಿಗೆ ಅನಿವಾರ್ಯ ಅಗತ್ಯವಾಗುತ್ತಿರುವುದನ್ನು ಸಹ ಸರ್ಕಾರ ತಳ್ಳಿ ಹಾಕಬಾರದು.

ಇಂತಹ ಉದ್ಯೋಗ ರಂಗದಲ್ಲಿ ಪ್ರವೇಶಿಸ ಬಯಸುವ ಮಹಿಳೆಯರಿಗಾಗಿ ಸರ್ಕಾರ ಬೇರೆ ಬೇರೆ ರಕ್ಷಣಾ ವಿಧಾನಗಳನ್ನು ಹಾಗೂ ಕಾನೂನು ಮಿತಿಗಳನ್ನೂ ತರಬೇಕಾಗುತ್ತದೆ. ಮಹಿಳೆಯರು ಆಯ್ಕೆ ಮಾಡಿಕೊಂಡ ಸಂರಕ್ಷಿತ ಸ್ಥಳಗಳಿಗೆ ಆಟೋ ಓಡಿಸಲು ಅನುಮತಿ, ಸಮಯದ ಮಿತಿ, ರೂಢಿಯಾದಾಗ ಸಹಾಯ ಮಾಡಲು ವಿಶೇಷ ಮಹಿಳಾ ಪೋಲೀಸ್ ಪಡೆ ಇಂತಹ ಕೆಲವು ಸವಲತ್ತುಗಳನ್ನು ಒದಗಿಸಿ ಕೊಡುವುದರ ಮೂಲಕ ಮಹಿಳೆಯರ ಅನಿಸಿಕೆಗಳಿಗೆ ನೀರೆರೆದು ಪ್ರೋತ್ಸಾಹಿಸುವುದು ಸರ್ಕಾರದ ಕರ್ತವ್ಯವಾಗಿದೆ.

ಭಾಗ್ಯ ಜಯಸುದರ್ಶನರ

# 'ಕಳೆದು ಹೋಗಿದ್ದಾನೆ ಮನುಷ್ಯ'

## ಒಂದು ಅವಲೋಕನ

ಬದುಕು, ಪರಿಸರ, ವ್ಯಕ್ತಿ, ಸಮಾಜ ಹಾಗೂ ಮನುಷ್ಯನ ಜೀವನ ತಳಕು ಹಾಕಿಕೊಂಡ ರೀತಿಗಳು "ಭಾಗ್ಯ ಜಯಸುದರ್ಶನ" ರ ಕವನದ ವಸ್ತುಗಳು. ಮುಖ್ಯವಾಗಿ "ಭಾಗ್ಯ" ರ ಕವನಗಳ ಸರಳತೆ ನಮ್ಮ ಮನ ತಟ್ಟುತ್ತದೆ, ಕವನಗಳಲ್ಲಿ ಬಳಕೆಯಾಗಿರುವ ಪ್ರತಿಮೆಗಳು ಸರಳತೆ ಹಾಗೂ ಅರ್ಥಪೂರ್ಣತೆಯನ್ನು ಧ್ವನಿಸುತ್ತವೆ. ಈ ಕವನಗಳಲ್ಲಿ ಗೋಜಲು, ಗೊಂದಲಮಯ ಪ್ರತಿಮೆಗಳ ವಿಜೃಂಭಣೆ ಇಲ್ಲ. ಮನುಷ್ಯನ ಅಂತರಂಗ–ಬಹಿರಂಗ ಜಗತ್ತಿನ ವೈರುಧ್ಯ, ವೈದೃಶ್ಯಗಳು, ಆತನ ಜೀವಂತಿಕೆಗಳ ಸುತ್ತ ಸುತ್ತು ಹಾಕುತ್ತವೆ ಈ ಕವನಗಳು,

ಮರೆವಂತೂ ಬೇಕು
ಹಳೆತೆಲ್ಲವನ್ನೂ ಕಿತ್ತೊಗೆದು
ಮತ್ತೆ ಹೊಸತಾಗುವುದಕ್ಕೆ
ಮರೆವು ಬೇಕೇ ಬೇಕು
ಹೃದಯ ಹೃದಯಗಳು
ಸ್ವಚ್ಛ ಸ್ಫಟಿಕವಾಗುವುದಕ್ಕೆ

ನಮ್ಮ ದೈನಂದಿನ ಬದುಕಿನಲ್ಲಿ ಮರೆವು ಹೇಗೆ ನಾಟಕೀಯವಾಗಿ ಬರುತ್ತದೆ. ಹಾಗೆಯೆ ಮರೆವು ಇತಿಹಾಸದಲ್ಲಿ ಕಥೆಗಳನ್ನೇ ಸೃಷ್ಟಿಸಿದೆ. ಆದರೆ ಮರೆವಿನ ಅಂತ್ಯ ಮಾತ್ರ ಹೃದಯಗಳನ್ನು ಸ್ವಚ್ಛವಾಗಿಸುವುದಾಗಬೇಕು. ಮರೆವಿನಂತಹ ಸರಳ ವಿಷಯ ದಿನ ನಿತ್ಯದ ಬದುಕಿನಲ್ಲಿ ನೈಜ ಹುಟ್ಟು ಪಡೆದು, ಇತಿಹಾಸದಲ್ಲಿಯೂ ಘಟನೆಗಳಾಗಿವೆ. ಮರೆವಿನಿಂದಾದ ಒಳಿತು, ಕೆಡಕುಗಳು ಅಂದಿನಿಂದ ಇಂದಿಗೂ ಒಂದೆ. ಆದರೆ ಮರೆವಿನ ಅಂತ್ಯ ಮಾತ್ರ ಹೃದಯ ಹೃದಯಗಳನ್ನು ಸ್ವಚ್ಛವಾಗಿಸುವುದಾಗಬೇಕು ಎನ್ನುವಲ್ಲಿ ಬದುಕಿನ ಆಶಯಗಳನ್ನು ಧ್ವನಿಸಿದ್ದಾರೆ.

ಅಂತೆಯೇ "ಕನಸುಗಳು" ನಮ್ಮಲ್ಲಿ ಬೆಳೆಯುತ್ತವೆ ನೆಲಮುಗಿಲನ್ನು ತಬ್ಬುತ್ತವೆ—

ಕನಸುಗಳು ಬೇಕು ನಮಗೆ
ನಿಮಗೆ ಜೀವಂತವಿರುವ ಎಲ್ಲರಿಗೆ

ಜೀವಂತಿಕೆಯನ್ನು ಉಳಿಸಿಕೊಳ್ಳುವ ಪ್ರತಿಯೊಬ್ಬರಿಗೂ ಕನಸು ಬೇಕು. ಆದರೆ ಕನಸುಗಳು ಯಾವುದೋ ಕಾಲ್ಪನಿಕ ಜಪತ್ತಿನವಲ್ಲ. ಅವು ನಮ್ಮ ಬದುಕಿನ ದಿಕ್ಕುಗಳನ್ನು ತೆರೆಯುವ ದೀವಿಗೆಗಳಾಗಬೇಕು.

ಚೆಲ್ಲಿ ಬಿಡಬೇಕು ಕನಸುಗಳನ್ನು
ಅವು ಮೋಡಗಳಾಗಿ ಹನಿಯಾಗಿ
ಮಳೆಯಾಗಿ ಈ ನೆಲವ ಸೇರಬೇಕು
ನಾಳೆ ಅವು ಅಲ್ಲಿಂದಲೇ
ಜೀವ ತಳೆದೆದ್ದು
ನೆಲ ಮುಗಿಲನ್ನು ತಬ್ಬಬೇಕು.

ಎನ್ನುವಲ್ಲಿ ಕವನದಲ್ಲಿನ ಜೀವನೋತ್ಸಾಹ ವಾಸ್ತವಿಕ ಬದುಕಿನಲ್ಲಿನ ಜೀವಂತ ಮಿಡಿತ ಇದೆ. ಹಾಗೆಯೆ ಮನುಷ್ಯನ ಜೀವನದ ನಿರಂತರತೆಯ ಚಕ್ರ ಈ ಕನಸುಗಳಾಗಿವೆ.

ಈ ಭುವಿಯಲ್ಲಿ ಕುಡಿಯೊಡೆಯುವ ಬದುಕಿಗೆ ಇತಿಹಾಸದ ಪುಟಗಳೇ "ಮುಖಾಮುಖಿ" ಯಾಗಿವೆ

ಹೊಸದಾಗಿ ನಾವು ಮತ್ತೆ ಹುತ್ತ ಬೆಳೆಸಿಕೊಳ್ಳಬೇಕಾಗಿಲ್ಲ!. ರಾಮಾಯಣ, ಮಹಾಭಾರತದ ಪಾತ್ರಗಳೇ ಇಂದಿಗೂ ನಮ್ಮ ಸುತ್ತಲೂ ಸುತ್ತುತ್ತಿವೆ. ಅಲ್ಲಿಯ ನಾಯಕರೇ ನಮಗೆ ಆದರ್ಶನೀಯ. ಹಾಗೆಯೇ ಮುಂದುವರೆದ ಕವನ ಈ ಸಮಾಜದಲ್ಲಿನ ಹೆಣ್ಣಿನ ಜಗತ್ತನ್ನೇ ತೆರೆದಿಡುತ್ತದೆ. ಕಾಲಯುಗಗಳು ಸಂದರೂ ಸೀತೆಯ ಕಣ್ಣೀರು, ಅಹಲ್ಯೆಯ ಆರ್ತನಾದ, ದ್ರೌಪದಿಯ ರೋಷಪೂರಿತ ನೇತ್ರ, ಗಾಂಧಾರಿಯ ಬಿಚ್ಚದ ಕಣ್ಣಬಟ್ಟೆಗೆ, ಕುಂತಿಯ ಮಹಾಮೌನ ಇವೆಲ್ಲ ಇಂದಿಗೂ ಹೆಣ್ಣಿಗೆ ಆದರ್ಶನೀಯ ಸತ್ಯಗಳಾಗಿವೆ. ಎಂಬ ವ್ಯಂಗ್ಯ ಅಡಗಿದೆ.

ಹಾಗೆಯೇ "ಒಂದು ವರ್ಣನೆ" ಕವನದಲ್ಲಿ ನಾಯಕನೆಂದರೆ ಹೇಗಿರಬೇಕೆಂದು ಹೇಳುತ್ತಾ ಶೌರ್ಯ, ಪರಾಕ್ರಮ, ಸತ್ಯಸಂಧತೆಗೆ ಹೆಸರಾದ ರಾಮ–ಭೀಮರನ್ನು ಉದಾಹರಿಸುತ್ತಾರೆ. ಹಾಗೆಯೇ ನಾಯಕಿಯೆಂದರೆ ಹೇಗಿರಬೇಕೆಂದು ಹೇಳುತ್ತಾ

ಸೀತೆಗಿಂತ ಬೇರೆ ಬೇಕೆ
ಆಹಾ! ಎಂತಹ ಸತೀ ಸಾಧ್ವಿ
ಅಷ್ಟಿದ್ದರೆ ಸಾಕು
ನಮ್ಮ ಪುರುಷರೆಲ್ಲರಿಗೆ
ಭಾರತವೇ ಬೇಕು ಜನುಮ ಜನುಮಕೂ

ರಾಮ–ಭೀಮರು ಶೌರ್ಯ ಪರಾಕ್ರಮಗಳಿಂದ ನಾಯಕರು ಆದರೆ ಸೀತೆ, ಶಕುಂತಲೆ, ದ್ರೌಪದಿ, ಅಹಲ್ಯೆ ಕೊನೆಗೆ ನಮ್ಮೆಲ್ಲರ ತಾಯಂದಿರೆ ನಮ್ಮ ನಾಯಕಿಯರು — ಎನ್ನುವಲ್ಲಿ ಹೆಣ್ಣು ಎಂದರೆ ಕಷ್ಟ ಸಹಿಷ್ಣುತೆ, ಪತಿಭಕ್ತಿ ಮಾತೃತ್ವ ಇದೇ ಹೆಣ್ಣಿನ ಜೀವನದ ಆದರ್ಶ. ಗಂಡು–ಹೆಣ್ಣಿನ ಜಗತ್ತು ಹೇಗೆ ಇತಿಹಾಸದುದ್ದಕ್ಕೂ ಸೃಷ್ಟಿಯಾಗಿದೆ ಹಾಗೆಯೇ ಇಂದಿಗೂ ಮುಂದುವರೆಯುತ್ತಿದೆ.

ದುಷ್ಯಂತನಿಗಾಗಿ ಕಾಯುತ್ತಾ, ಕಾಯುವ ಹಿಂಸೆಯಲ್ಲಿ ಬೇಯುತ್ತಾ, ಅವಿತಿಟ್ಟುಕೊಂಡ ಪ್ರಾಣಲಿಂಗದ ಆಸೆಯಲ್ಲಿ ಒಂಟಿಯಾಗಿ, ವಿರಹ ವೇದನೆಯಲ್ಲಿ [illegible]

"ಶಕುಂತಲಾ ಪ್ರಲಾಪ"ದ ವಸ್ತು ತನ್ಮೂಲಕ ಶಕುಂತಲೆಯ ನೋವಿಗೆ ಧ್ವನಿಯಾಗಿಸಿದ್ದಾರೆ.

ಮೇಲಿನ ಮೂರು ಕವನಗಳು (ಮುಖಾಮುಖಿ ಒಂದು ವರ್ಣನೆ, ಶಕುಂತಲಾ ಪ್ರಲಾಪ) ಇತಿಹಾಸದುದ್ದಕ್ಕೂ ಸೃಷ್ಟಿಯಾಗಿರುವ ಸ್ತ್ರೀ ಜಗತ್ತಿನ ಒಂದು ಮುಖವನ್ನು ಚಿತ್ರಿಸುತ್ತವೆ.

"ವಿಮರ್ಶಕರಿದ್ದಾರೆ ಎಚ್ಚರಿಕೆ" ಕವನದ ಹೆಸರೇ ಸೂಚಿಸುವಂತೆ ಭಾಗ್ಯ ವಿಮರ್ಶಕರ ನಿಲುವನ್ನು ಟೀಕಿಸಿದ್ದಾರೆ. "ಹೆರುವ ನೋವಿ"ನಲ್ಲಿ ಹೆತ್ತರಿಂದ ಒಂದು ಎಣಿಸುತ್ತಿರುವಾಗ ಸೊನ್ನೆ ಸುತ್ತಲು ಎಲ್ಲಿಂದ ಅವತರಿಸಿದರು ಎಂದು ವಿಸ್ಮಯಪಟ್ಟಿದ್ದಾರೆ. "ನಾವು ಹೆರುವ ಮಗುವಿಗೆ ಅವರದೆ ಬಣ್ಣ, ಆಕಾರ ಕೊಟ್ಟು ಇದರ ಹಣೆಬರಹ ಇಷ್ಟೆ ಎನ್ನುವ ನವಬ್ರಹ್ಮರು" ಎನ್ನುತ್ತಾ, ತಮ್ಮ ವಿಷಾದ ವ್ಯಕ್ತಪಡಿಸಿದ್ದಾರೆ. ತಮ್ಮ ಕಟು ವಿಮರ್ಶೆ, ತಮ್ಮದೇ ನಿಲುವಿನ ಮೂಲಕ ಬರಹಗಾರರ ಅಂತಃಸತ್ವವನ್ನೇ ಉಡುಗಿಸುವ ಇಂದಿನ ವಿಮರ್ಶಕರ ನಿಲುವನ್ನು ಟೀಕಿಸುವ ಮೂಲಕ ನಮ್ಮ ಸೃಜನಶೀಲ ಲೇಖಕರ ಧ್ವನಿಯಾಗಿದ್ದಾರೆ. ಮಹಿಳಾ ಸಾಹಿತ್ಯವನ್ನಂತೂ ಕಳಪೆಯಾಗಿ ನೋಡುವ ವಿಮರ್ಶಕರ ದೃಷ್ಟಿ ಹೊಸದೇನಲ್ಲ.

ಬದುಕಿನ "ಮುಸ್ಸಂಜೆ"ಯಲ್ಲಿ ಜೀವನದ ಯುದ್ಧವನ್ನು ಮುಗಿಸಿ ಕೂತ ಮನುಷ್ಯ ತನ್ನ ಜೀವನದ ಪುಟಗಳನ್ನು ತಿರುವುತ್ತಾ ಈ ಜಗತ್ತಿನಲ್ಲಿ ತಾನು ಪಡೆದದ್ದೆಷ್ಟು, ಹೋರಾಡಿದ್ದೆಷ್ಟು ಎಂದು ಲೆಕ್ಕ ಹಾಕುತ್ತಾನೆ. ತನ್ನದೇ ಆದ ಆಳ, ಹರವುಗಳನ್ನು ಹೊಂದಿದ ಪ್ರೌಢ ಕವನ "ಮುಸ್ಸಂಜೆ", ಮನುಷ್ಯನ ಬದುಕಿನ ಸಂಜೆಯನ್ನು ಸೂಕ್ತವಾಗಿ ಚಿತ್ರಿಸುತ್ತದೆ.

ಬರೆಯಲೆಷ್ಟಿದೆ ಬದುಕು
ತೊಡಿಸಲಾರದ ಆಕಾಶದ ಹಾಳೆ
[illegible]

ನನ್ನೆಣಿಕೆಗೆ ಮೀರಿ ನಿಲ್ಲುವಷ್ಟು

ಹೊತ್ತಿಲ್ಲ ತ್ರಿವಿಕ್ರಮವಾಗಿ ಬೆಳೆಯುವಷ್ಟು
ವಾಮನನನ್ನು ಕಂಡು ಕೊಳ್ಳುವುದರಲ್ಲಿ
ಪಯಣದ ಗಸ್ತು ಸುಸ್ತು

ಎನ್ನುವ "ಹೇಗೆ" ಕವನದ ಸಾಲುಗಳು ಮನುಷ್ಯನ ಸಾಮರ್ಥ್ಯದ ಇತಿ-ಮಿತಿಗಳನ್ನು ಬಿಂಬಿಸುತ್ತವೆ. ಕಾಲಗರ್ಭದಲ್ಲಿ ಕೊಚ್ಚಿಹೋಗುತ್ತಿರುವ ಮನುಷ್ಯನ ಹುಟ್ಟು-ಸಾವುಗಳ ಮಧ್ಯದ ಬದುಕಿನಲ್ಲಿ ಅವನು ಸಾಧಿಸಬೇಕಾದ್ದು ಬೇಕಾದಷ್ಟಿದೆ. ಆದರೆ ತ್ರಿವಿಕ್ರಮನಂತೆ ಬೆಳೆಯಲಾಗದೆ ವಾಮನನನ್ನು ಕಂಡುಕೊಳ್ಳುವುದರಲ್ಲಿ ನಮ್ಮ ಪಯಣ ಮುಗಿಯುತ್ತದೆ ಎನ್ನುವಲ್ಲಿ ಈ ಬದುಕಿನಲ್ಲಿ ನಾವು ಸಾಧಿಸಲಾಗದ ವಿಷಾದ ಅಡಗಿದೆ.

"ಧಗೆ" ಕವನ ಮನುಷ್ಯನ ಅಂತರಂಗಿಕ ಜಗತ್ತು ಹಾಗೂ ಬಾಹ್ಯ ಜಗತ್ತಿನ ವೈರುಧ್ಯಗಳನ್ನು ಚಿತ್ರಿಸುತ್ತದೆ. ಬಾಹ್ಯ ಜಗತ್ತಿನ ಧಗೆಯಲ್ಲೂ ಮನುಷ್ಯನ ಅಂತರಂಗ ತೆರೆದುಕೊಂಡೇ ಇದೆ.

ಚಿತ್ತ ಭಿತ್ತಿಯ ಮೇಲೆ
ಧಗೆಯ ನರ್ತನದಲಿ
ಗೋಪಾಲನ ಬಾಲಲೀಲೆಗಳು
ಕೊಳಲ ಗಾನಗಳು

ಹೊರಗಡೆಯ ಜಗತ್ತು ಒಳಗಿಲ್ಲ. ಬಾಹ್ಯ ಜಗತ್ತಿನ ಧಗೆಯಲ್ಲೂ ಹಗಲಿನಲ್ಲಿಯೇ ನಕ್ಷತ್ರಗಳನ್ನು ಎಣಿಸುತ್ತಾ ತನ್ನ ಅಂತರಂಗದ ಜೀವಂತಿಕೆಯನ್ನು ತೆರೆದುಕೊಂಡೇ ಇರುತ್ತಾನೆ.

ಭುವಿಯ ಅನಂತತೆಯಲ್ಲಿ ನಡೆಯುವ ಎಲ್ಲಾ ಕ್ರಿಯೆಗಳಿಗೂ ಪ್ರತ್ಯಕ್ಷದರ್ಶಿಯಾಗಿ ಒಂದು ಮಹಾ ಮೌನ ಅಡಗಿದೆ. ಯಾವುದೋ ನಿಗೂಢತೆಯನ್ನು ಹೆಪ್ಪುಗಟ್ಟಿಸುವ ಭಯಂಕರ ಮೌನ. ನಮ್ಮ ಪ್ರಕೃತಿಯಲ್ಲಿನ ಗೂಢತೆಯನ್ನು ತೆರೆದಿಡುವ ಧನ್ಯಭಾವದ ಒಂದು ಸುಂದರ ಕವನ "ಮೌನ".

ಸದೃಢ ಮೈಕಟ್ಟು
ಪಾಪ! ಮನುಷ್ಯ ಬಹಳ ನಿಸ್ವಾರ್ಥಿ.
ಸುಖ ದುಃಖಕ್ಕೆ ಒಳಗಾಗದವ
ನಿರ್ಲಿಪ್ತ ಬುದ್ಧ
ಸುಳಿವು ಸಿಕ್ಕಬಹುದೆ

ಎನ್ನುವ "ಕಳೆದು ಹೋಗಿದ್ದಾನೆ ಮನುಷ್ಯ" ಕವನದ ಸಾಲುಗಳು ನಮ್ಮ ಸಮಾಜ ಹಾಗೂ ಮನುಷ್ಯ ಜನಾಂಗದ ವಿಡಂಬನೆಯನ್ನು ಕುರಿತದ್ದಾಗಿದೆ. ಇಂದು ನಮ್ಮ ಸಮಾಜ ವಿನಾಶಕಾರಿ ದಾರಿಯತ್ತ ಹೆಜ್ಜೆ ಹಾಕಿದೆ. ಸ್ವಾರ್ಥ ಅಪ್ರಮಾಣಿಕತೆಗಳೇ ತುಂಬಿರುವ ಈ ಸಮಾಜ ಪುಂಡರ, ತುಂಟರ, ತಂಟೆಕೋರರ ಬೀಡಾಗಿದೆ. ಇಂಥವರ ನಡುವೆ ಪ್ರಾಮಾಣಿಕ ನಿಸ್ವಾರ್ಥಿ ಮನುಷ್ಯನಿಗೆ ಯಾವ ಬೆಲೆಯೂ ಇಲ್ಲ. ಹಾಗಾಗಿ ಸರಳ, ನಿರ್ಲಿಪ್ತ ಮನುಷ್ಯ ಪುಂಡರ, ತಂಟೆಕೋರರ ನಡುವೆ ಕಳೆದು ಹೋಗಿದ್ದಾನೆ.

ಗುಂಪಿನಲ್ಲಿ ಗೋವಿಂದವಾಗುವುದೆ ಲೇಸು. ಅಷ್ಟಷ್ಟು ಅಸಮಾನತೆಗಳು ಸಮವಾಗುತ್ತವೆ. ಬದುಕು ಅಷ್ಟು ಸಾಕು. ಎನ್ನುವಲ್ಲಿ ಹೇಗೋ ಹೊಂದಿಕೊಂಡು ಹೋಗಬೇಕೆನ್ನುವ ಧ್ವನಿ ಅಡಗಿದೆ.

ಮೈ ಬೆಚ್ಚಗೆ ಮನ ಬೆಚ್ಚಗೆ ತನ್ನ ಸೂರಿನ ಕೆಳಗೆ ತಾನಿದ್ದರೂ ಕೂಡ ತನ್ನ ಸುತ್ತ ಮುತ್ತಲಿನ ಪ್ರಕೃತಿಗೆ ನಮ್ಮ ಅವಯವಗಳು ತೆರೆದಿರಬೇಕು. ಎನ್ನುವ "ಅವಸ್ಥೆ" ಕವನದಲ್ಲಿ ಬದುಕಿನ ಜೀವಂತ ಮಿಡಿತ ಇದೆ

ಒಂದೇ ಒಂದು ಪುಟ್ಟ
ಪ್ರಶ್ನೆ ನಿಮಗೆ
ನನ್ನ ಹುಟ್ಟು
ನನ್ನ ಕೈಯಲಿಲ್ಲದಕ್ಕೆ
ಹುಟ್ಟುತ್ತಿದ್ದೇನೆ ಮತ್ತೆ
ಹುಟ್ಟುತ್ತಿದ್ದೇನೆ

ಎನ್ನುವ "ಪಾರ್ಥೇನಿಯಂ" ನ ನುಡಿ ಸಮಾಜದಲ್ಲಿ ಬೇಡವಾಗಿದ್ದು ತನ್ನಿಂದ ತಾನೇ ಹುಟ್ಟುತ್ತದೆ. ಇವುಗಳ ಮಧ್ಯೆಯೇ ಮನುಷ್ಯ ಬದುಕ ಬೇಕಾದಿರುವುದು ಇದೇ ಬದುಕಿನ ವ್ಯಂಗ್ಯ.

ಶಬ್ದಕ್ಕೆ ಹೊರತಾದ ಅರ್ಥಗಳು
ಆತ್ಮೀಯತೆ ಅನುಬಂಧಗಳ
ಬಂಧವೇರ್ಪಡದಂತೆ
ನಿರ್ಬಂಧಿಸಿದ ಕೋಟೆಗೋಡೆಗಳ
ಬೆಳೆದ ಹುತ್ತದ ಪರದೆಗಳು

ಈ ಸಮಾಜದಲ್ಲಿ, ಪರಿಸರದಲ್ಲಿ ಒಂದಾಗಬೇಕೆಂದು ಅಭ್ಯಾಸ ಮಾಡಿಕೊಳ್ಳುತ್ತಿದ್ದರೂ ಎಲ್ಲೋ ಅಪರಿಚಿತಳಾಗಿಯೇ ಈ ಪರಿಸರದಲ್ಲಿ ಉಳಿಯಬೇಕಾಗುತ್ತದೆ. ಎಲ್ಲೋ ಜಟಿಲಗೊಳ್ಳುತ್ತಾ ಹೋಗುವ ಈ ಪರಿಸರದಲ್ಲಿ ಹೊಂದಿಕೊಳ್ಳಬೇಕೆನ್ನುವ ಕವಿ ಪ್ರೇಕ್ಷಕನಾಗಬೇಕಾಗುತ್ತದೆ. ಅದಕ್ಕೂ ಕೂಡ ಸಿದ್ಧತೆ ಬೇಕು. ಸರಳೀಕೃತವಾಗದ ಬದುಕು ಸಾಧಿದಷ್ಟೂ ಜಟಿಲ ಎನ್ನುತ್ತದೆ, "ಅಭ್ಯಾಸ" ಕವನ.

"ಹಂಚಿಕೊಳ್ಳುತ್ತೇವೆ" ನಾವು ನಾಲ್ಕು ಗೋಡೆಗಳ ಮಧ್ಯೆಯನ್ನು, ಕನಸುಗಳನ್ನು ಗಾಳಿ, ಬೆಳಕು ಎಲ್ಲವನ್ನೂ ಆದರೆ —

ಮರೆಯುವುದಿಲ್ಲ
ಒಂದೇ ಒಂದನ್ನು ನಾವು
ನಾವೆಲ್ಲಾ ಸ್ಫೋಟಗೊಂಡ ಪ್ರತ್ಯೇಕ
ಗ್ರಹಗಳೆಂಬುದನ್ನು

ಬಾಹ್ಯ ಜಗತ್ತಿನ ಪ್ರತಿಯೊಂದನ್ನು ನಾವು ಹಂಚಿಕೊಂಡರೂ ಕೂಡ ಪ್ರತಿಯೊಂದು ಜೀವಿಗೂ ತನ್ನದೇ ಆದ ಅಸ್ತಿತ್ವ ಇದೆ. ತನ್ನದೇ ಆದ ಆಂತರಿಕ ಜಗತ್ತನ್ನು ಹೊಂದಿದೆ.

ತಲ್ಲೀನತೆಯು ಪರಮ ಸುಖದಲ್ಲಿಯೇ ಇರಬೇಕೆಂದರೂ, ಬಯಸದ ವಾಸ್ತವತೆಗೆ ಎಳೆಯುವ ಎರಡು ಕ್ಷಣಗಳನ್ನು ಕುರಿತ "ಎರಡು ಕ್ಷಣಗಳು" ಕವನ ಮನುಷ್ಯನ ಆಂತರಿಕ ನೋಯನ್ನು ಕುರಿತದ್ದು.

ಈ ಪ್ರಕೃತಿಯಲ್ಲಿ ಸಾಗುವ ಜೀವನ ಒಂದು ಮಹಾವೃಕ್ಷದಂತೆ. ಈ ಪ್ರಕೃತಿಯ ಒಡಲಲ್ಲಿ ಇತಿಹಾಸದುದ್ದಕ್ಕೂ ಜೀವನ ಸಾಗಿ ಬಂದಿದೆ. ಪ್ರಕೃತಿ— ಮನುಷ್ಯ ಇಬ್ಬರ ಸಾಮರಸ್ಯದೊಂದಿಗೆ ಸಾಗಿದೆ ಜೀವನ. ಪ್ರಕೃತಿ ನೀಡಿದ ಆಸರೆಗೆ ಋಣ ಸಂದಾಯ ಮಾಡಲೇಬೇಕು.

ಬಡ್ಡಿ ಚಕ್ರಬಡ್ಡಿಯ ಚಕ್ರಕ್ಕೆ
ಬಲಿಯಾಗಬೇಕು
ಚಿಗುರು, ಎಲೆ, ಹಸಿರು ಎಲ್ಲವೂ
ಫಲವಾಗಬೇಕು
ಬೀಜದೊಳಗೆ ಅಡಗಿ ಕುಳಿತಿದೆ
ಅಸಲು ಮತ್ತೆ ಋಣ ಸಂದಾಯ,

ಜೀವನ ಚಕ್ರದ ಇತಿಹಾಸ ತನ್ನಂತಾನೇ ತಿರುಗುತ್ತಾ "ಬೀಜದೊಳಗೇ ಅಡಗಿ ಕುಳಿತು ಅಸಲು" ಋಣ ಸಂದಾಯವಾಗುತ್ತಲೇ ಸಾಗುತ್ತದೆ, ಇದು ನಿರಂತರ ಕ್ರಿಯೆ.

"ಕಾಲ" ವೆಂದರೆ ಅತ್ಯಂತ ಸರಳವೆಂದು ಕಾಣುವ ಪ್ರಶ್ನೆ ಅರೆ! ಎಷ್ಟು ಜಟಿಲ ಉತ್ತರ ಎನ್ನಿಸುವ ಒಂದು ಸುಂದರ ಕವನ. ಮಗು ತಾಯಿಯನ್ನು "ಅಮ್ಮ, ಕಾಲವೆಂದರೇನು?" ಎಂದು ಕೇಳುವ ಸರಳ ಪ್ರಶ್ನೆ ಅದಕ್ಕೆ ತಾಯಿ ನೀಡುವ ಉತ್ತರ ಕಾಲದ ವಿವಿಧ ದಿಕ್ಕುಗಳನ್ನು ತೆರೆದಿಡುತ್ತದೆ.

ಆ ಬಾಗಿಲು ಈ ಬಾಗಿಲು
ನಮಗೆ ನಮಗೆ ತಕ್ಕಂತೆ
ಬಾಗಿಲುಗಳ ತಟ್ಟುತ್ತಾ
ಕದ ತೆರೆಯುವಷ್ಟರಲ್ಲೇ
ಬಂದು ಮುಟ್ಟುತ್ತೇವೆ
ಕೊನೆ ಬಾಗಿಲಿಗೆ

ಎನ್ನುತ್ತಾ ಮುಗಿಯುವ ಕವನ ಸಂಕಲನ ಹುಟ್ಟು— ಸಾವುಗಳ ಮಧ್ಯದ ಬದುಕಿನ ಸತ್ಯಗಳನ್ನು ತೆರೆದಿಡುತ್ತದೆ,

ಹೊರ ನೋಟಕ್ಕೆ ಸರಳವೆಂದು ಗೋಚರಿಸುವ

ಕವನಗಳು ತಮ್ಮದೇ ಧ್ವನಿಯನ್ನು ಹೊಂದಿ ಆಳಕ್ಕೆ ಇಳಿದ ಹಾಗೆ ಕವಿ ತನ್ನೊಳಗಿನ ಅಂತರಂಗವನ್ನು ತೆರೆದಿಟ್ಟಂತೆ ಭಾಸವಾಗುತ್ತನೆ. ಕವಿಯ ಅಂತಃಸತ್ವ ತೆರೆದುಕೊಂಡಿರುವುದು ಮನುಷ್ಯನ ಅಂತರಂಗವನ್ನು ಜೀವಂತವಾಗಿಡುವಲ್ಲಿ. "ಅಂತರಂಗದ ಜೀವಂತಿಕೆ ಮನುಷ್ಯನ ಬದುಕಿನ ಜೀವಂತಿಕೆ" ಜೀವಂತಿಕೆಯನ್ನು ಉಳಿಸಿಕೊಂಡು ಸಮಾಜದಲ್ಲಿ ಬದುಕನ್ನು ಅರಳಿಸಬೇಕೆನ್ನುವುದು ಕವಿಯ ಆಶಯ. ಆದರೆ ವಾಸ್ತವಿಕತೆಯಲ್ಲಿನ ಕಟು ಸತ್ಯಗಳ ಅನುಭವಗಳೂ ಕವನದಲ್ಲಿ ತೆರೆದುಕೊಂಡಿವೆ. ಈ ಸಮಾಜಕ್ಕೆ ಹೊಂದಿಕೊಳ್ಳಬೇಕೆನ್ನುವ ಸಮಾಧಾನ, ಮತ್ತೊಮ್ಮೆ "ಗುಂಪಿನಲಿ ಗೋವಿಂದವಾಗುವುದೆ ಲೇಸು" ಎನ್ನುವಲ್ಲಿ ಪ್ರತಿಭಟನೆಯಿಂದ ಎಲ್ಲೋ ನುಣುಚಿಕೊಳ್ಳುವಂತೆ ಭಾಸವಾಗುತ್ತದೆ. ಇತಿಹಾಸದೊಂದಿಗೆ ಇಂದಿನ ಬದುಕನ್ನು ತಳಕು ಹಾಕತ್ತಾ ನಡೆದಿದ್ದಾರೆ. ಇತಹಾಸ, ಸಮಾಜ, ಮಾನವನ ಬದುಕು, ಸ್ತ್ರೀ ಜೀವನದ ದಿಕ್ಕುಗಳು, ಅಂತರಂಗದ ಜೀವಂತಿಕೆ, ಹುಟ್ಟು–ಸಾವುಗಳ ಮಧ್ಯದ ಬದುಕಿನಲ್ಲಿ ಆದಷ್ಟು ಪಡೆದುಕೊಳ್ಳಬೇಕೆನ್ನುವ ತೀವ್ರತೆ, ತಡೆಯಲಾಗದ ವಿಷಾದ, ಹೀಗೆ ಬದುಕಿನ ಎಲ್ಲಾ ಸೂಕ್ಷ್ಮ ಅವಯವಗಳಿಗೆ ಕವಿಯ ಸೂಕ್ಷ್ಮ ದೃಷ್ಟಿ ತೆಗೆದುಕೊಂಡಿದೆ. ಹಾಗೆಯೇ ಪ್ರತಿಯೊಂದು ಕವನವೂ ಕವಿಯ ಆಶಯದೊಂದಿಗೆ, ನಿಲುವಿನೊಂದಿಗೆ ಇಲ್ಲವೆ ಒಂದು ತೀರ್ಮಾನದೊಂದಿಗೆ ಅಂತ್ಯಗೊಳ್ಳುತ್ತವೆ. ತನ್ಮೂಲಕ ಕವನಗಳನ್ನು ಪೂರ್ಣಗೊಳಿಸುತ್ತವೆ. ಇಂತಹ ತೀರ್ಮಾನಗಳು ಕೆಲವೊಮ್ಮೆ ಕವನಗಳನ್ನು ಮಿತಿಗೊಳಿಸಿದಂತೆಯೂ ಭಾಸವಾಗುತ್ತವೆ. ಆದರೆ ಇತ್ತೀಚಿನ ಕವನಗಳ ಬೆಳವಣಿಗೆಯಲ್ಲಿ "ಭಾಗ್ಯ ಜಯಸುದರ್ಶನ"ರು ಏರಿದ ಮೆಟ್ಟಿಲುಗಳು ಗಮನಾರ್ಹವಾದುದು. "ಕಳೆದು ಹೋಗಿದ್ದಾನೆ ಮನುಷ್ಯ" ಭಾಗ್ಯರ ಇನ್ನೊಂದು ಗಮನಾರ್ಹ ಬೆಳವಣಿಗೆ.

ಪ್ರೇಮಾವತಿ.

## ದಿಟ್ಟೆ

ಸೋಲಿನ ಬೂದಿಯಿಂದ
ಎಚ್ಚೆತ್ತಂತೆ
ಕಣ್ಣೀರ ತೊಡೆದು
ಎದ್ದಂತೆ
ಎದ್ದು ನಡೆಯಲು
ಕೈ ಚಾಚಿದಂತೆ
ದಿಟ್ಟೆ ನೀನೆನ್ನುತ
ಅವನು ಹೊರಟು ಹೋದನು

ಕನಸುಗಳ ನೆರಳ್ಹಿಡಿದು
ಓಡತೊಡಗಿದಂತೆ
ಬಯಕೆಗಳ ಬಿಸಿಲಿಗೆ
ಮೈಯೊಡ್ಡಿದಂತೆ,
ನಾನು ನಾನಾಗಲು
ಯತ್ನಿಸಿದಂತೆ
ದಿಟ್ಟೆ ನೀನೆನ್ನುತ
ಅವನು ಹೊರಟು ಹೋದನು.

ಉಜ್ವಲಾ ಪುಣಜಗೌಡ.

## ತಪ್ಪು ?

ಹೆಣ್ಣಿನ ಜೀವನವೇ ತಪ್ಪು
ಹೆಣ್ಣು ಹೊರಗಡೆ ನಿಂತರೂ ತಪ್ಪು
ಏನು ನೋಡಿದರೂ ತಪ್ಪು
ಯಾರೊಡನೆ ಮಾತಾಡಿದರೂ ತಪ್ಪು
ಹೆಣ್ಣಿನ ಬಾಳೆ ತಪ್ಪು

ಅವಳು ಹುಟ್ಟಿದ ಘಳಿಗೆ ತಪ್ಪು
ಅವಳು ಬೆಳೆದ ವಾತಾವರಣ ತಪ್ಪು
ಕೊನೆಗೂ ಈ ತಪ್ಪು
ಎಷ್ಟು ದಿನ ತಪ್ಪಾಗೇ ಉಳಿದೀತು

ಅವಿದ್ಯಾವಂತರೂ, ಅನಾಗರೀಕರು
"ತಪ್ಪು" ಎನ್ನುವ ಪದಕ್ಕೆ
"ಹೆಣ್ಣು" ಎಂದು ಹೋಲಿಸಿದ್ದಾರೆಯೇ?

ನಜಹತ್ ಷಾಹೀನ್

# ಸ್ತ್ರೀ ಸಂಚಯ

## ವಿಮುಕ್ತಿ

ಲೇ: ಹೆಚ್. ವಿ. ಸಾವಿತ್ರಮ್ಮ.
ಪ್ರ: ಕಾವ್ಯಾಲಯ ಪ್ರಕಾಶಕರು
ಮೈಸೂರು–೧೪

....ಅವಳ ಕಣ್ಣುಗಳಲ್ಲಿ ಅನಂತ ವಿಶ್ವಾಸ ತುಂಬಿತ್ತು. ಅಂದು ಲಂಕೆಯಲ್ಲಿ ರಾಮ ತನ್ನನ್ನು ಕಠಿಣ ವಾಕ್ಯಗಳಿಂದ ನೋಯಿಸಿ ಚಿತೆಯನ್ನು ಹೊಗಿಸಿದಾಗಲೂ ಲಕ್ಷ್ಮಣ ಆದರದ ಮಾತುಗಳನ್ನಾಡಿದ್ದನು. ರಾಮನಿಗೆ ಬೇಡವಾದರೂ ಅಯೋಧ್ಯೆಯ ಅರಮನೆಯಲ್ಲಿ ತನಗೆ ಸ್ಥಾನವಿದೆಯೆಂದು ಆಶ್ವಾಸನೆ ನೀಡಿದ್ದನು. ಹೀಗಿರುವಾಗ ಈಗ ತನ್ನನ್ನು ಈ ನೆಚ್ಚಿನ ಮೈದುನ ನಟ್ಟಡವಿಯಲ್ಲಿ ಬಿಟ್ಟು ಹೋಗುವನೆ? ಸೀತೆಗೆ ನಂಬಲಾಗಲಿಲ್ಲ. ಪುನಃ ಲಕ್ಷ್ಮಣನ ಮುಖ ನೋಡಿದಳು. ಆದರಲ್ಲಿ ಅನಂತವಾದ ನೋವಿತ್ತೇ ಹೊರತು ಹುಡುಗಾಟದ ಚಿಹ್ನೆಯಿರಲಿಲ್ಲ. ಧಾರಾಳವಾಗಿ ಅಳುತ್ತಾ ನಿಂತ ಲಕ್ಷ್ಮಣನನ್ನು ನೋಡಿ ಮೊದಲ ಬಾರಿಗೆ ಸೀತೆಯ ಹೃದಯದಲ್ಲಿ ಭೀತಿ ಸಂಚಾರವಾಯಿತು. "ನಿಜವಾಗಿ ಈ ಕಾಡಿನಲ್ಲಿ ನನ್ನನ್ನು ಬಿಟ್ಟು ಹೋಗುತ್ತೀಯಾ ಲಕ್ಷ್ಮಣ? ನಿಮ್ಮಣ್ಣನಿಗೆ ತಿಳಿದರೆ ಸುಮ್ಮನಿರುತ್ತಾರೆಯೇ? ಅಥವಾ........ಸೀತೆ ಅರ್ಧೋಕ್ತಿಯಲ್ಲಿ ನಿಲ್ಲಿಸಿದಳು.

ಲಕ್ಷ್ಮಣ ಉದ್ವೇಗದಿಂದ "ಹೌದು ಅತ್ತಿಗೆ, ನಿಮ್ಮ ಎಣಿಕೆ ನಿಜವಾದುದು. ಹೀಗೆ ಮಾಡೆಂದು ಅಣ್ಣನೇ ಅಪ್ಪಣೆ ಮಾಡಿದ್ದಾನೆ" ಎಂದನು.

ಸೀತೆ ರಥದಿಂದಿಳಿದು ನಿಂತಳು "ಅಯೋಧ್ಯೆಗೆ ಹಿಂದಿರುಗಿದಂದಿನಿಂದ ನಿಮ್ಮ ಅಣ್ಣನ ಮನಸ್ಸು ಸರಿಯಾಗಿಲ್ಲವೆಂದು ಊಹಿಸಿದೆ. ಆದರೆ ನನಗೆ ಪುನಃ ಇಂತಹ ಶಿಕ್ಷೆ ವಿಧಿಸುತ್ತಾನೆಂದುಕೊಳ್ಳಲಿಲ್ಲ. ಕಾಲ ಕ್ರಮೇಣ ಆತನ ಮನಸ್ಸಿನಿಂದ ಸಂಶಯ ದೂರವಾಗಿ ಪುನಃ ಸುಖದ ದಿನಗಳು ಬರಬಹುದೆಂದುಕೊಂಡಿದ್ದೆ. ನನ್ನ ನಿರೀಕ್ಷೆ ಸುಳ್ಳಾಯಿತು. ಹೋಗು ಲಕ್ಷ್ಮಣಾ ನನಗೇನೂ ಹೆದರಿಕೆಯಿಲ್ಲ; ಮನುಷ್ಯನಿಗಿಂತ ಭಯಂಕರವಾದ ಪ್ರಾಣಿ ಜಗತ್ತಿನಲಿಲ್ಲ. ಕಾಡು ಮೃಗಗಳು ದೈಹಿಕವಾಗಿ ಬಾಧಿಸಬಲ್ಲವು, ಆದರೆ ಮನಸ್ಸನ್ನು ಚುಚ್ಚಿ ಗಾಯಗೊಳಿಸಲು ಮನುಷ್ಯನಿಗೆ ಮಾತ್ರ ಸಾಧ್ಯ" ಎಂದಳು.

ಲಕ್ಷ್ಮಣ "ಬೇಡ ಅತ್ತಿಗೆ, ಈ ಕೆಲಸ ನನ್ನಿಂದಾಗದು ರಥದಲ್ಲಿ ಕುಳಿತುಕೊಳ್ಳಿ ಹಿಂದಕ್ಕೆ ಹೊರಟು ಹೋಗೋಣ" ಎಂದನು.

"ಇಲ್ಲಿಯವರೆಗೆ ಬಂದ ಮೇಲೆ ಪುನಃ ಹಿಂದಕ್ಕೆ ಬಂದು ನಾನು ಮಾಡುವುದೇನಿದೆ ಲಕ್ಷ್ಮಣಾ? ಸಂಶಯದ ಕೂರಲಗಿನಿಂದ ತಿವಿಸಿಕೊಳ್ಳುತ್ತಾ ದಿನದಂತೆ ದಿನಗಳನ್ನು ಕಳೆಯಲು ನನಗಿನ್ನು ಸಾಧ್ಯವಿಲ್ಲ. ಇಷ್ಟು ದಿನಗಳನ್ನು ಕಳೆಯುವ ವೇಳೆಗೇ ನನಗೆ ಸಾಕುಬೇಕಾಯಿತು. ರಾಮ ಈಗ ನನಗೆ ಸ್ವಾತಂತ್ರ್ಯ ದಯಪಾಲಿಸಿದ್ದಾನೆ. ನನ್ನ ಮನಸ್ಸಿಗೆ ತೋರಿದಂತೆ ನಾನು ಮಾಡಬಹುದು. ರಾಮನ ಮನಸ್ಸಿನಲ್ಲಿ ಏನು ತುಮುಲ ನಡೆಯುತ್ತಿದೆಯೆಂದು ಹೆದರಿ ಕಾತರಗೊಳ್ಳಬೇಕಾಗಿಲ್ಲ. ಮನಸ್ಸುಗಳು ಹೊಂದದ ಮೇಲೆ ದೂರವಿರುವುದೇ ಒಳ್ಳೆಯದು. ಆತನಿಗೂ ಶಾಂತಿ, ನನಗೂ ನೆಮ್ಮದಿ. ನೀನು ಹಿಂದಿರುಗಿ ಹೋಗಿ ನಿಮ್ಮಣ್ಣನಿಗೆ ಹೇಳು. ನನಗೇನೂ ಭಯವಿಲ್ಲ! ಬೇಸರವಿಲ್ಲ! ಈ ಒಂದು ಕಾರ್ಯದಿಂದ ನನ್ನನ್ನು ನಿಶ್ಚಿಂತೆಯಿಂದ ಜೀವಿಸಲು ಬಿಡುಗಡೆ ಮಾಡಿದ್ದಕ್ಕಾಗಿ ನಾನು ಸದಾ ಋಣಿಯೆಂದು ಹೇಳು."

"ಅತ್ತಿಗೆ, ನೀವು ನೊಂದು ಮಾತನಾಡುತ್ತಿದ್ದೀರಿ. ಬೆಳಗಿನ ಹೊತ್ತೇ ಈ ಕಾಡು ದಟ್ಟವಾಗಿ

ಭಯಂಕರವಾಗಿದೆ. ಇಲ್ಲಿ ರಾತ್ರಿ ಇಬ್ಬರೇ ಹೇಗಿರುತ್ತೀರಿ? ಬಂದು ಬಿಡಿ. ಅತ್ತಿಗೆ. ಅಣ್ಣನಿಗೆ ಅಸಮಾಧಾನವಾದರೂ ಚಿಂತೆಯಿಲ್ಲ. ನಾನೂ ಊರ್ಮಿಳೆಯೂ ನಿಮ್ಮನ್ನೆಲ್ಲಾದರೂ ದೂರ ಕರೆದುಕೊಂಡು ಹೋಗಿ ಸುಖವಾಗಿಟ್ಟುಕೊಳ್ಳುತ್ತೇವೆ."

"ಬೇಡ ಲಕ್ಷ್ಮಣಾ. ನೀನು ಹೋಗು ರಾಜಾಜ್ಞೆಯನ್ನು ಪಾಲಿಸು. ನಾನೂ ಕೂಡ ನನ್ನ ಮನಸ್ಸನ್ನು ಒಂದು ಹಾದಿಗೆ ತರಬೇಕಾಗಿದೆ. ಹೆಣ್ಣಾದುದರಿಂದ ತೀರ ಕಳೆದುಕೊಂಡಿದ್ದ ವ್ಯಕ್ತಿತ್ವವನ್ನು ಈಗ ರೂಪಿಸಿಕೊಳ್ಳಬೇಕಾಗಿದೆ. ಇದುವರೆಗೆ ನಾನು ರಾಮನ ನೆರಳಾಗಿ ನಡೆದುಕೊಂಡೆ. ಅವನು ಕೈಬಿಟ್ಟರೆ ಬೆಂಕಿಗೆ ಹಾರುವುದರ ವಿನಃ ಬೇರೆ ಮಾರ್ಗ ತೋರಲಿಲ್ಲ. ಕೆಲವು ದಿನಗಳಿಂದ ನನ್ನ ಮನಸ್ಸಿನಲ್ಲೂ ಮಂಥನ ನಡೆಯುತ್ತಿದೆ. ನಾನೂ ಬದುಕಬೇಕು. ನನ್ನ ಆಸೆ ಅಭಿಲಾಷೆಗಳಿಗೂ ಒಂದು ಸ್ಥಾನವಿದೆ. ಇಷ್ಟು ದಿನ ಉಸಿರು ಕಟ್ಟಿದಂತೆ ಆ ಅರಮನೆಯಲ್ಲಿ ಕಾಲ ಕಳೆದೆ. ರಾಮ ದಯೆ ತೋರಿ ನನ್ನ ಬಿಡುಗಡೆಗೆ ಅಪ್ಪಣೆ ಮಾಡಿದ್ದಾನೆ. ಒಳ್ಳೆಯದೇ ಆಯಿತು. ಆಯುಸ್ಸಿದ್ದರೆ ಬದುಕುತ್ತೇನೆ. ಇಲ್ಲದಿದ್ದರೆ ಹೋಗುತ್ತೇನೆ. ರಾಮನ ಪ್ರತಿಕ್ರಿಯೆಯನ್ನೇ ಸದಾ ದೃಷ್ಟಿಯಲ್ಲಿಟ್ಟುಕೊಂಡು ವ್ಯರ್ಥ ಬಾಳನ್ನು ನೂಕಿದೆ. ನನಗೂ ಒಂದು ವ್ಯಕ್ತಿತ್ವವಿದೆ. ಅಭಿಮಾನವಿದೆ ಎಂಬುದನ್ನು ಆತ ಗುರುತಿಸಲಾರದೆ ಹೋದ. ಅಹಂಕಾರದಿಂದ, ಸ್ವಾರ್ಥತೆಯಿಂದ ಆತ ಕುರುಡನಾಗಿದ್ದಾನೆ. ಆತನ ಕಣ್ಣು ತೆರೆಸುವ ಸಾಮರ್ಥ್ಯ ನನ್ನಲ್ಲಿಲ್ಲ. ಬೇಡಬಿಡು. ಪಡೆದುಕೊಂಡು ಬಂದಷ್ಟನ್ನೇ ಉಣ್ಣಲು ಸಾಧ್ಯ. ಹೋಗಿ ಬಾ "

"ಹೋಗಲಿ ಅತ್ತಿಗೆ ಇಲ್ಲೇ ಸ್ವಲ್ಪ ದೂರದಲ್ಲಿ ವಾಲ್ಮೀಕಿ ಮಹರ್ಷಿಯ ಆಶ್ರಮವಿದೆ. ಅದರ ಸಮೀಪದಲ್ಲಿ ಬಿಡುತ್ತೇನೆ ಮಹರ್ಷಿಗಳ ಆಶ್ರಯದಲ್ಲಿರಬಹುದು."

ಸೀತೆ "ಇದೇನು, ಒಂದೆರಡು ದಿನಗಳ ಕತೆಯೇ ಲಕ್ಷ್ಮಣಾ? ಇನ್ನೆಷ್ಟು ಕಾಲ ಬದುಕಬೇಕೋ, ಎಷ್ಟು ಬವಣೆ ಪಡಬೇಕೋ! ಕೈ ಹಿಡಿದ ಗಂಡನೇ ಕಾಡು ಪಾಲು ಮಾಡಿರುವಾಗ ಬೇರೆಯವರ ಮೇಲೆ ನನ್ನ ಜೀವನ ಭಾರವನ್ನು ಹೊರಿಸಲು ನನಗಿಷ್ಟವಿಲ್ಲ. ಇಲ್ಲೇ ಒಂದು ಮರದ ಆಶ್ರಯದಲ್ಲಿ ಗೆಡ್ಡೆ ಗೆಣಸು ತಿಂದು ಕಾಲ ಹಾಕುತ್ತೇನೆ. ಅಥವಾ — ಇಲ್ಲಿಯೇ ಇದ್ದರೆ ನಿನ್ನ ಮನಸ್ಸಿಗೆ ತೊಂದರೆಯಾಗಬಹುದು. ಪುನಃ ಈ ನಿರ್ಭಾಗ್ಯ ಅತ್ತಿಗೆಯನ್ನು ಹುಡುಕಿ ಬರಬೇಕೆನ್ನಿಸಬಹುದು. ಎಲ್ಲಾದರೂ ಬೇರೆ ಒಂದು ಸ್ಥಳ ಹುಡುಕಿಕೊಳ್ಳುತ್ತೇನೆ" ಎಂದಳು. ಕಣ್ಣಲ್ಲಿ ನೀರು ಸುರಿಯುತ್ತಿರಲು ಲಕ್ಷ್ಮಣ "ಅತ್ತಿಗೇ ನನ್ನ ಎದೆ ಒಡೆದು ಹೋಗುತ್ತಿದೆ. ಇಲ್ಲಿ ನೀವು ಆಹಾರಕ್ಕೆ ಕಷ್ಟ ಪಡುತ್ತಿದ್ದರೆ ನಾವೆಲ್ಲಾ ಅರಮನೆಯಲ್ಲಿ ಹೇಗಿರುವುದು?"

"ಕಷ್ಟವೇನು ವತ್ಸಾ? ನೀನೇನೂ ಪೇಚಾಡಬೇಡ. ಅರಣ್ಯವಾಸದ ಶಿಕ್ಷಣವನ್ನು ನಿಮ್ಮಣ್ಣನಿಂದ ಚೆನ್ನಾಗಿ ಕಲಿತಿದ್ದೇನೆ. ಬದುಕಿರಲು ಪ್ರಯತ್ನಿಸುತ್ತೇನೆ. ನಿಮ್ಮಣ್ಣ ನಿರಾಕರಿಸಿದ ಮಾತ್ರಕ್ಕೆ ಆತ್ಮಹತ್ಯೆ ಮಾಡಿಕೊಳ್ಳಬೇಕೆಂಬ ಮನೋಭಾವ ನನಗೀಗ ಇಲ್ಲ. ಕೆಲವು ದಿನಗಳ ಲೋಕಾನುಭವದಿಂದ ನನ್ನ ಮನಸ್ಸೂ ಕಲ್ಲಾಗಿದೆ. ಆಶ್ರಯಕೊಡಬೇಕಾದ ನಿಮ್ಮಣ್ಣ ಕಾಡಿಗೆ ನೂಕಿದರೆ ನನ ಕಾಲ ಮೇಲೆ ನಾನು ನಿಲ್ಲಬೇಕೆಂಬ ಛಲ ಮೂಡಿದೆ. ಬದುಕುತ್ತೇನೆ. ನನ್ನ ತಂದೆಯ ತಪಸ್ಸಿನ ಬಲದಿಂದ ವೃದ್ಧಾಪ್ಯದಲ್ಲಿ ನನಗೂ ಒಂದು ಆಸರೆ ಸಿಕ್ಕಿ ನಾನೂ ನೆಮ್ಮದಿಯಾಗಿರಬಹುದು. ಭವಿಷ್ಯತ್ತಿನಲ್ಲಿ ಏನಡಗಿದೆಯೋ ಕಂಡವರಾರು? ಹೋಗಿ ಬಾ ಲಕ್ಷ್ಮಣಾ. ಅಂದು ನೀನು ನಮಗೆ ಅಡವಿಯಲ್ಲಿ ಸೊಗಸಾದ ಪರ್ಣಶಾಲೆ ನಿರ್ಮಿಸಿಕೊಟ್ಟೆ. ಊರು ಬಿಟ್ಟು ಬಂದೆನೆಂಬ ಅರಕೆ ತೋರದಂತೆ ನಡೆಸಿಕೊಂಡೆ. ನಿನ್ನ ಸ್ನೇಹ ವಿಶ್ವಾಸಗಳನ್ನೆಂದಿಗೂ ಮರೆಯಲಾರೆ" ನಿಟ್ಟುಸಿರುಬಿಟ್ಟು "ಬಹಳ ಸುಖವಾಗಿರುತ್ತೇನೆಂದು ಕನಸು ಕಂಡ ಆಸೆಗಳೆಲ್ಲಾ ಒಡೆದು ಚೂರಾಯಿತು. ಇಲ್ಲ ಲಕ್ಷ್ಮಣಾ ನಾನು ಧೈರ್ಯವಾಗಿರುತ್ತೇನೆ. ಭವಿಷ್ಯವನ್ನು ಆತ್ಮವಿಶ್ವಾಸ ಸ್ಥೈರ್ಯಗಳಿಂದ ಎದುರಿಸುತ್ತೇನೆ. ಹೆಂಗಸೆಂದರೆ ತನ್ನ ಆಟದ ಗೊಂಬೆಯೆಂದು ತಿಳಿದಿರುವ ನಿಮ್ಮಣ್ಣ ಕಣ್ಣು ತೆರೆಯುವಂತೆ ಬದುಕುತ್ತೇನೆ. ಹೋಗಿ ಬಾ" ಎಂದು ಎದ್ದಳು.

---

# ಕನಸುಗಳ ಕಟ್ಟಬೇಡ

ಕಟ್ಟಬೇಡ
ಕನಸುಗಳ ತಂಗಿ
ಕಟ್ಟಿದರೂ
ರೆಕ್ಕೆಗಳ ಹಚ್ಚಬೇಡ
ಸುಂದರ ಮಾಮರದಲ್ಲಿ
ಅಡಗಿ ಕೂತ ಪುಟ್ಟ
ಹಕ್ಕಿ, ಪುರ್‍ರೆಂದು
ಬಾನಿಗೆ ಹಾರಿದ ಹಾಗಲ್ಲ
ಈ ಬದುಕು, ತಂಗಿ

ಮುಚ್ಚಿದ ಕಣ್ಣೆವೆಗಳಲ್ಲಿ
ಬೇರೊಡೆಯುವ
ಕನಸುಗಳಿಗೆ ಇಲ್ಲ
ಮಣ್ಣು, ನೀರು, ಗೊಬ್ಬರ

ಬೇಡ ತಂಗಿ
ಕನಸುಗಳ
ಹಿಡಿದಿಡುವ ಯತ್ನ
ದಕ್ಕಲಾರದು
ನಿನ್ನ ಮುಷ್ಠಿಗೆ
ಭಾನ ವೈಶಾಲ್ಯ
ಕಾದಿವೆ ಇಲ್ಲಿ
ದ್ವಾರಗಳ ಮುಚ್ಚುವ
ಪಂಜರಗಳು

ತಂಗಿ, ಕನಸುಗಳ
ಕಟ್ಟಬೇಡ ಹರಿವ
ನದಿಗೆ ನಿಂತಿದೆ
ನೋಡು ದೋಣಿ
ಛಲ ಬಿಡದೆ
ಹುಟ್ಟು ಹಾಕಿ ನದಿಯ
ದಾಟು ತಂಗಿ

ಪ್ರೇಮಾವತಿ

# ಮೌನ ಮಾತಾದಾಗ

ಸ್ತ್ರೀಯರಲ್ಲಿ ಮೂಡುತ್ತಿರುವ ಜಾಗೃತಿ ಹಾಗೂ ಬದಲಾಗುತ್ತಿರುವ ಸಾಮಾಜಿಕ ಪರಿಸರದಿಂದಾಗಿ ಸ್ತ್ರೀಯರ ಸಮಸ್ಯೆಗಳನ್ನು ನೋಡುತ್ತಿರುವ ದೃಷ್ಟಿಕೋನಗಳು ಬದಲಾಗುತ್ತಿವೆಯಲ್ಲವೆ? ಇಂತಹ ಆಲೋಚನೆ, ವಿಚಾರಗಳು ಅಸ್ಪಷ್ಟವಾಗಿದ್ದು ವೈರುಧ್ಯಗಳಿಂದ ಕೂಡಿರಬಹುದು. ಮಹಿಳಾ ಶೋಷಣೆ, ಕೌಟುಂಬಿಕ ಜವಾಬ್ದಾರಿ, ವಿವಾಹ ಪದ್ಧತಿ, ವರದಕ್ಷಿಣೆ, ಅಸಮಾನವೇತನ ಮುಂತಾದ ವಿಷಯಗಳ ಸುತ್ತ ನಿಮ್ಮ ಸ್ವಂತ ವಿಚಾರಗಳನ್ನು ಹಾಗು ಅನುಭವಗಳನ್ನು ಪುಟ್ಟ ಲೇಖನದ ರೂಪದಲ್ಲಿ ಬರೆದು ಕಳಿಸಿದ ಲೇಖನಗಳಿಗೆಂದು "ಮೌನ ಮಾತಾದಾಗ" ಅಂಕಣವಿದೆ. ಪ್ರಕಟವಾದ ಲೇಖನಗಳಿಗೆ ಪ್ರತಿಕ್ರಿಯೆಗಳನ್ನು ಪ್ರಕಟಿಸಲಾಗುವುದು.

ಸಂ. ಮಂ.

## ಹೆಣ್ಣು ಅಬಲೆ ಅಲ್ಲ ಸಬಲೆ

ಹೆಣ್ಣು ಜನ್ಮ ತಾಳಿದಂದಿನಿಂದ ಅವಳ ಅಂತ್ಯ ಜೀವನದವರೆಗೂ ನಾನಾ ಬಗೆಯ ಸಂಕೋಲೆಗಳಿಂದ ಬಂಧಿತಳಾಗಿದ್ದಾಳೆ. ಚಿಕ್ಕವಳಿರುವಾಗ ತಂದೆ–ತಾಯಿಯರಿಂದ, ಮದುವೆಯ ನಂತರ ಗಂಡನಿಗೆ, ವೃದ್ಧೆಯಾದಾಗ ಮಕ್ಕಳಿಗೆ ಅಧೀನಳಾಗಿರಬೇಕು,

ಹೀಗೆ ಹೆಣ್ಣು ಜೀವನ ಪೂರ್ತಿ ಬಂಧಿತಳಾಗಿರಲು ಅವಳಿಗೇನು ಸ್ವಾಭಿಮಾನ, ಆತ್ಮವಿಶ್ವಾಸ, ಹಾಗೂ ಮನೋಸ್ಥೈರ್ಯವಿಲ್ಲವೇನು ಎಂಬ ಪ್ರಶ್ನೆ ಮನಸ್ಸನ್ನು ಕಾಡುತ್ತದೆ. ಆದರೆ ಈ ಗುಣಗಳು ಅವಳಲ್ಲಿ ರೂಪುಗೊಳ್ಳಲು ಮನೆಯ ವಾತಾವರಣ, ಸಮಾಜದ ಕಟ್ಟುಪಾಡು, ಸಂಪ್ರದಾಯಗಳಿಂದ ಅಸಾಧ್ಯವಾಗಬಹುದು ಎಂದರೆ ತಪ್ಪಾಗಲಾರದು.

ಹೆಣ್ಣು ಅಬಲೆಯೆಂಬ ದೃಢಭಾವನೆ ಅಚ್ಚಳಿಯದೆ ಉಳಿದಿತ್ತು ಒಮ್ಮೆ. ಆದರೆ ಪರಿಸ್ಥಿತಿಯನ್ನು ಪರಿಶೀಲಿಸಿ ನೋಡಿದಾಗ ಹೆಣ್ಣು ಖಡಾ ಖಂಡಿತವಾಗಿ ಅಬಲೆಯಲ್ಲ ಸಬಲೆಯೆಂದು ಸಾಬೀತು ಪಡಿಸುವ ಕಾರ್ಯಗಳನ್ನು ಹೆಣ್ಣು ಮಾಡಿ ತೋರಿಸಿದ್ದಾಳೆ. ಮತ್ತು ನಮ್ಮ ಕಣ್ಣ ಮುಂದೆ ನಡೆಯುತ್ತಿವೆ.

ಹೆಣ್ಣು ಎಂಬ ಎರಡು ಅಕ್ಷರ ಕೇಳಿದ ಗಂಡಸರೇಕೆ ಕೀಳುಭಾವನೆ ತಾಳುತ್ತಾರೆ. ಏಕೆ ಗಂಡಸಿನಂತೆ ಹೆಣ್ಣಿಗೆ ಕಣ್ಣು, ಕಿವಿ, ಮೂಗು ಮತ್ತು ಕೈ ಕಾಲುಗಳಿಲ್ಲವೆ? ಸ್ವಾಭಿಮಾನ, ಆತ್ಮವಿಶ್ವಾಸ, ದೃಢ ಸಂಕಲ್ಪಗಳಿಲ್ಲವೆ? ಏಕೆ ಇಲ್ಲ, ಹೆಣ್ಣು ಗಂಡಸಿನ ಗುಲಾಮಳಲ್ಲ ಅವಳು ಗಂಡಸಿನಷ್ಟೆ ಸ್ವತಂತ್ರಳು. ಹೆಣ್ಣು ಎಲ್ಲಾ ರಂಗದಲ್ಲಿ ರಾಜಕೀಯವಾಗಿ, ಸಾಮಾಜಿಕವಾಗಿ, ಶಿಕ್ಷಕಿಯಾಗಿ, ಮತ್ತು ಲೇಖಕಿಯರಾಗಿ, ಪ್ರಧಾನಿ, ಡಿ. ಸಿ. ಪೋಲಿಸ್, ಡಾಕ್ಟರ್ ಇತ್ಯಾದಿ ಎಲ್ಲ ರಂಗದಲ್ಲೂ ಹೆಣ್ಣಿನ ಸಾಧನೆ ಇದ್ದೇ ಇದೆ.

ಹೆಣ್ಣು ಗಂಡಸರ ಟೀಕೆಗಳಿಗೆ ಹುರುಳಿಲ್ಲವೆಂಬಂಥ ಕಾರ್ಯಗಳನ್ನು ಸಾಧಿಸಿ ತೋರಿಸಿದ್ದಾಳೆ. ಕೇವಲ ನಾಲ್ಕು ಗೋಡೆಗಳ ಮಧ್ಯಕ್ಕೆ ಮಾತ್ರ ಸೀಮಿತವಲ್ಲ. ಹೆಣ್ಣಿಗೆ ಅಡಿಗೆ ಮನೆಯೇ ಎಲ್ಲ, ಬಟ್ಟೆ ಒಗೆಯುವುದು, ಗಂಡನ ಸೇವೆ ಮಾಡುವುದು ಮತ್ತು ಮಕ್ಕಳಿಗೆ ಜನ್ಮ ನೀಡುವುದು, ಲಾಲನೆ–ಪಾಲನೆ ಮಾಡುವುದು, ಅತ್ತೆ–ಮಾವ ಗಂಡನಿಗೆ ಎದುರು ಮಾತನಾಡಬಾರದು, ಗಂಡ ಹೇಳಿದ್ದಕ್ಕೆಲ್ಲ ಗೋಣು ಹಾಕಿ ಕೆಲಸ ಮಾಡಬೇಕೆಂಬ ಕೀಳು ಭಾವನೆಯನ್ನು ಗಂಡಸರು ಹೊಂದಿದ್ದಾರೆ. ಅವಳ ಸ್ಥಾನ–ಮಾನವೇನು? ಹೆಣ್ಣು ಎಂತಹ ಕೆಲಸಗಳಲ್ಲಿ ತೊಡಗುತ್ತಿದ್ದಾಳೆ.

ಬಹಳ ಜನ ತಿಳಿದಿರುವಂತೆ ಹೆಣ್ಣು ಎಂದರೆ ಕೇವಲ ಕಾಮದ, ಭೋಗದ ವಸ್ತುವಲ್ಲ. "ಹೆಣ್ಣು ಒಲಿದರೆ ನಾರಿ ಮುನಿದರೆ ಮಾರಿ" ಎಂಬ ಸತ್ಯವನ್ನು

ಗಂಡಸರು ಅರ್ಥಮಾಡಿಕೊಂಡಿಲ್ಲ. ಈಚೀಚೆಗೆ ಹೆಣ್ಣಿನ ಮಹಿಮೆಯನ್ನು ತಿಳಿಯುತ್ತಿದ್ದಾರೆಂದರೆ ತಪ್ಪಾಗಲಾರದು.

ಹೆಣ್ಣು ಅಬಲೆಯಾಗಲು ಗಂಡಸರೇ ಬಲವಾದ ಕಾರಣವೆಂದು ಕೆಲವೊಂದು ನಿದರ್ಶನಗಳ ಮೂಲಕ ವ್ಯಕ್ತ ಪಡಿಸಬಹುದು.

ಒಂದು ಸುಂದರವಾದ ಹೆಣ್ಣು ಗಂಡಸರ ಕಣ್ಣಿಗೆ ಬಿದ್ದರೆ ಆಕೆಯನ್ನು ತನ್ನ ಬಲೆಗೆ ಹಾಕಿಕೊಳ್ಳಲು ಪ್ರಯತ್ನಿಸುತ್ತಾರೆ. ಹೆಣ್ಣು ಏನಾದರೂ ಗಂಡಸರ ಮರುಳು ಮಾತಿಗೆ, ನಡತೆಗೆ, ವೇಶ ಭೂಷಣಗಳಿಗೆ, ಶ್ರೀಮಂತಿಕೆಗೆ ಮನಸೋತು ಅವನ ಕೈ ಗೊಂಬೆಯಾದರೆ ಆಗ ಗಂಡಸರು ಅವಳಲ್ಲಿ ಪಡೆಯಬಹುದಾದ ಸುಖವನ್ನೆಲ್ಲಾ ಪಡದು ಅಂದರೆ ದುಂಬಿ ಹೂವಿನಲ್ಲಿರುವ ಮಕರಂದ್ದವನ್ನು ಹೀರಿ, ನಂತರ ಇನ್ನೊಂದು ಹೂವಿಗೆ ಹಾರುವಂತೆ, ಹೆಣ್ಣಿನಲ್ಲಿ ಇರುವ ಸುಖವನ್ನೆಲ್ಲ ಪಡೆದು ಕೊನೆಗೆ ಹೂವನ್ನು ಮುಡಿದು ಬಾಡಿದ ಮೇಲೆ ಕಸದ ಬುಟ್ಟಿಗೆ ಎಸೆಯುವಂತೆ ಎಸೆಯುತ್ತಾರೆ. ಹೆಣ್ಣು ಗಂಡಸಿನ ಸಂಪರ್ಕದಿಂದ ಮಗುವಿಗೆ ತಾಯಿಯಾಗುವ ಸೂಚನೆ ಕಂಡುಬಂದಾಗ ಅಥವಾ ಮಗುವಿಗೆ ತಾಯಿಯಾದಾಗ "ನಾನು ನಿನ್ನನ್ನು ಪ್ರೀತಿಸಿದ್ದು ಕೇವಲ ಕ್ಷಣಿಕ ಸುಖಕ್ಕಾಗಿ ಮತ್ತು ನಿನ್ನ ಸೌಂದರ್ಯಕ್ಕಾಗಿ. ನಿನ್ನ ಹೊಟ್ಟೆಯಲ್ಲಿರುವ ಮಗುವಿಗೆ ನಾನು ಹೊಣೆಯಲ್ಲ, ತಂದೆಯಲ್ಲ" ಎಂದು ನಾನಾ ಬಗೆಯ ಮಾತುಗಳಿಂದ, ಹಣದ ಆಸೆಯನ್ನು ತೋರಿಸುವುದರ ಮೂಲಕ ಜಾರಿಕೊಳ್ಳುವ ಗಂಡಸರ ಸಂಖ್ಯೆಯೇನು ಕಡಿಮೆಯೆ? ನಮ್ಮ ಅಕ್ಕ ತಂಗಿಯರ ಜೀವನವನ್ನೇ ನಾಶಮಾಡಿದ, ಮುಳ್ಳಿನ ಹಾದಿಗೆ ನೂಕಿದ ಎಷ್ಟು ಗಂಡಸರ ನಿದರ್ಶನಗಳು ನಮ್ಮ ಕಣ್ಣ ಮುಂದೆ ನಡೆಯುತ್ತಿಲ್ಲ? ಇಷ್ಟೆಲ್ಲ ಆದ ಮಾತ್ರಕ್ಕೇ ಹೆಣ್ಣು ಅಬಲೆಯಾದಳೆ? ಇಲ್ಲ. ಆಕೆ ಅಬಲೆಯಲ್ಲ. ಒಮ್ಮೆ ಶೀಲ ಕಳೆದುಕೊಂಡ ಹೆಣ್ಣು ಮತ್ತೆ ಎಂದೆಂದಿಗೂ ಯಾರಿಗೂ ಬೇಡವಾಗಿ ತನ್ನ ಮಗುವಿಗೆ ತಂದೆಯಾದವನ ಹೆಸರಿನಲ್ಲಿಯೇ ತನ್ನ ಅಮೂಲ್ಯ ಜೀವವನ್ನು ಕಳೆಯಬೇಕೆ? ಏಕೆ ಗಂಡಸರೆಂದರೆ ತಮಗೆ ಬೇಸರ ಬಂದಾಗ ತನ್ನ ಆಸೆಯನ್ನು ತೀರಿಸಿಕೊಳ್ಳಲು ಹಲ ಮಂದಿ ಸ್ತ್ರೀಯರ ಸಂಪರ್ಕವಿಟ್ಟುಕೊಳ್ಳಬುದು, ಹೆಣ್ಣು ಒಮ್ಮೆ ದಾರಿ ತಪ್ಪಿದರೆ ಜೀವನ ಪೂರ್ತಿ ಅನಾಥೆಯಾಗಿಯೇ ಇರಬೇಕೆ? ಇದಕ್ಕೆ ಗಂಡಸರೇ ಕಾರಣರಲ್ಲವೆ?

ಇಷ್ಟು ಮಾತ್ರಕ್ಕೇ ಹೆಣ್ಣನ್ನು "ಅಬಲೆ" ಎಂದು ತಿಳಿಯುತ್ತೀರಾ? ಖಂಡಿತಾ ನಂಬಬೇಡಿ. ನಮ್ಮ ದೇಶದ ಆಡಳಿತ ನಡೆಸಿದ ಇಂದಿರಾ ಗಾಂಧಿ ಗಂಡಸೇ? ಗಂಡಸಿನ ಸ್ಥಾನದಲ್ಲೇ ನಿಂತು ಆಡಳಿತ ನಡೆಸಿದ ಇಂದಿರಾ ಅಬಲೆಯೇ? ಅಲ್ಲ. ಸಬಲೆ.

ಸಾಹಿತ್ಯ ರಂಗದಲ್ಲಿ ಹೆಣ್ಣಿನ ಸ್ಥಾನ ಮಹತ್ವವಾದದ್ದು. ಎಂ. ಕೆ. ಇಂದಿರಾ. ತೇಜಸ್ವಿನಿ. ಅನುಪಮಾ ನಿರಂಜನ....ಇವರೆಲ್ಲ ಸ್ತ್ರೀಯರೇ ತಾನೆ?

ವಚನ ಸಾಹಿತ್ಯದಲ್ಲಿ ಕೀರ್ತಿಯನ್ನೆ ಮೆರೆಸಿದ ಅಕ್ಕ ಮಹಾದೇವಿ, ಮುಕ್ತಾಯಕ್ಕ, ನೀಲಲೋಚನೆ, ಮಹಾದೇವಮ್ಮ ಮುಂತಾದವರು ಅಬಲೆಯರೇ ಅಲ್ಲ ಸಬಲೆಯರು. ಅಕ್ಕ ಮಹಾದೇವಿ ತನ್ನ ಗಂಡನಾದ ಕೌಶಿಕ ಮಹಾರಾಜನನ್ನೇ ತೊರೆದು ಕೂದಲನ್ನೇ ಬಟ್ಟೆಯಾಗಿ ತೊಟ್ಟವಳು. ವಚನ ಸಾಹಿತ್ಯದಲ್ಲೇ ಕೀರ್ತಿ ಪಡೆದ ಅಕ್ಕಮಹಾದೇವಿ ಅಬಲೆಯೇ?

ಐತಿಹಾಸಿಕ ರಂಗದಲ್ಲಿ ವೀರ ಮಹಿಳೆಯರಾದ ಕಿತ್ತೂರು ಚೆನ್ನಮ್ಮ ನಮ್ಮ ದೇಶದ ಸ್ವಾತಂತ್ರ್ಯಕ್ಕಾಗಿ ಬ್ರಿಟಿಷರೊಡನೆ ಹೋರಾಡಿದ ಪ್ರಥಮ ವೀರ ಮಹಿಳೆಯರಲ್ಲವೆ? ಅಲ್ಲದೆ ಬೆಳವಡಿ ಮಲ್ಲಮ್ಮ. ಒನಕೆ ಓಬವ್ವ....ಇವರೆಲ್ಲ ಸಾಮಾನ್ಯ ಮಹಿಳೆಯರೆ? ಇವರೇ ಮುಂದಿನ ಮಹಿಳೆಯರಿಗೆ ದಾರಿದೀಪವಾಗಿದ್ದಾರೆ.

ಇಷ್ಟಲ್ಲದೆ ಶೈಕ್ಷಣಿಕ ರಂಗದಲ್ಲಿ ಪುರುಷರಿಗಿಂತ ಮಹಿಳೆಯರದೇ ಮೇಲುಗೈ. ಕ್ರೀಡಾ ರಂಗದಲ್ಲಿ ಪಿ. ಟಿ. ಉಷಾ ಚಿನ್ನದ ಪದಕವನ್ನು ಪಡೆದು ದೇಶಕ್ಕೇ ಕೀರ್ತಿ ತಂದಳು.

ಮೇಲಿನ ಎಲ್ಲ ನಿರೂಪಣೆಗಳಿಂದ ಮಹಿಳೆ ದುರ್ಬಲಳಲ್ಲ ಎಂದೆನಿಸದಿದ್ದೀತೆ?

ಹೆಣ್ಣು ಅಬಲೆಯಾಗಲು ತಂದೆ- ತಾಯಿಗಳೂ ಕಾರಣರಾಗಬಹುದು, ಹೇಗೆಂದರೆ ಹೆಣ್ಣು ಎಷ್ಟು ಓದಿದರೂ ಕೊನೆಗೆ ಮುಸುರೆ ತೊಳೆಯುವುದು ತಪ್ಪದು, ಲಕ್ಷಾನುಗಟ್ಟಲೆ ವರದಕ್ಷಿಣೆ ಕೊಟ್ಟು ಮದುವೆ ಮಾಡಬೇಕೆಂಬ ಹಿಂಜರಿಕೆಯೇ ಕಾರಣವಾಗಬಹುದು, ಅಲ್ಲದೆ ಮದುವೆಯಾದ ಹೆಣ್ಣು ಕೊಟ್ಟ ಮನೆಯಲ್ಲಿ ಅತ್ತೆ-ಮಾವ-ಗಂಡನಿಗೆ ತಗ್ಗಿ ಬಗ್ಗಿ ನಡೆಯಬೇಕು- ಅದೇ "ಶ್ರೇಷ್ಠ ಜೀವನ" ವೆಂಬ ತತ್ವ ಕಾರಣವಿರ ಬಹುದು,

ಹೆಣ್ಣಿಗಷ್ಟೆ ಗಂಡಸಿನ ಆಶ್ರಯಬೇಕು ಗಂಡಸ ರಿಗೆ ಬೇಡವೆ? ಹೆಣ್ಣಿಗಿಂತ ಮುಖ್ಯವಾಗಿ ಗಂಡಸರಿಗೆ ಅಗತ್ಯವಾಗಿಬೇಕು, ತನ್ನ ಧ್ಯೇಯವನ್ನು ಸಾಧಿಸಿಕೊ ಳ್ಳಲು ಗಂಡಸರಿಗೆ ಸ್ವಾತಂತ್ರ್ಯ ಕೊಟ್ಟ ಹಾಗೇ ಹೆಣ್ಣಿಗೂ ಸ್ವಾತಂತ್ರ್ಯ ಕೊಟ್ಟರೆ ಸಾಕು. ಪುರುಷ ರಷ್ಟೇ ಉದ್ಯೋಗವಂತರು ಮತ್ತು ಮನೆತನದ ಜವಾ ಬ್ದಾರಿ ನಡೆಸುವ ಸಾಮರ್ಥ್ಯವುಳ್ಳವರು ಎಂಬಂಥ ಭಾವನೆಗಳನ್ನು ಅಳಿಸಿಹಾಕಿ ಹೆಣ್ಣಿಗೂ ಅದೇ ಅವಕಾಶ ಗಳನ್ನು ಕೊಡಬೇಕು,

ಪುರುಷರ ತಾಳಕ್ಕೇ ಕುಣಿಯುವ, ಅವರು ಕೊಡುವ ಕಷ್ಟವನ್ನೆಲ್ಲ ನುಂಗಿಕೊಂಡು ಜೀವನ ಸಾಗಿ ಸುವ ನಮ್ಮ ಅಕ್ಕ-ತಂಗಿಯರ ನೋವಿನ, ದುಃಖದ ಘಟನೆಗಳು ನಮ್ಮ ಕಣ್ಣ ಮುಂದೆ ನಡೆಯುತ್ತಿವೆ, ಇಂತಹವುಗಳನ್ನು ಪ್ರತಿಭಟಿಸುವ ಸಾಮರ್ಥ್ಯ ನಮ್ಮಲ್ಲಿ ಇಲ್ಲವೆ? ನಾವೆಲ್ಲರೂ ಒಟ್ಟುಗೂಡಬೇಕು, ಅನ್ಯಾ ಯಗಳ ವಿರುದ್ಧ ಸಿಡಿದೇಳುವ ಛಲಬೇಕು. ಎಷ್ಟು ಹೆಣ್ಣುಗಳು ತಮ್ಮ ಜೀವವಿನಡೀ ಕಣ್ಣೀರಿನಲ್ಲಿ ಕೈತೊ ಳೆಯುತ್ತಿಲ್ಲ? ಹೀಗಾಗಲು ಹೆಚ್ಚಿನ ಸಂದರ್ಭಗಳಲ್ಲಿ ಗಂಡಸರೇ ಕಾರಣವೆಂದು ತಿಳಿಯಬಹುದು. ಆದರೆ ಎಲ್ಲರೂ ಇಂತಹ ಕಾಮುಕ, ಗೋಮುಖ ವ್ಯಾಘ್ರಗ ಳಂತಹವರೇ ಆಗಿರುವುದಿಲ್ಲ ಎನ್ನುವುದೂ ಸತ್ಯ.

ಈಚೀಚೆಗೆ ಹೆಂಗಸರ ಸಂಖ್ಯೆಗಿಂತ ಪುರುಷರ ಸಂಖ್ಯೆ ಹೆಚ್ಚುತ್ತಲಿದೆ. ಆದ್ದರಿಂದ ಹೆಣ್ಮಕ್ಕಳ ಓದಿ ವಿದ್ಯಾವಂತರಾಗಿ ಉದ್ಯೋಗ ಪಡೆದು ತಮ್ಮ ಕಾಲ ಮೇಲೆ ನಿಂತು, ನಮಗೆ ಮದುವೆಯಾಗದಿದ್ದರೂ ಪರವಾಗಿಲ್ಲ ಉದ್ಯೋಗವೇ ನಮ್ಮ ಗಂಡ ಎಂದು ತಿಳಿ ದರ ಸಾಕು, ರಭಸವಾಗಿ ಹರಿಯುವ ನದಿಯ ನೀರು ಹೇಗೆ ಒಂದೇ ಸ್ಥಳದಲ್ಲಿ ನಿಲ್ಲದೆ ಸಾಗುತ್ತ ದೆಯೋ ಹಾಗೆಯೇ ಮಹಿಳೆ ಕೂಡ ರಭಸವಾಗಿ ಹರಿ ಯುವ ನೀರಿನಂತೆ ಎಲ್ಲ ಕ್ಷೇತ್ರಗಳಲ್ಲಿ ಮುಂದುವ ರೆದು ಪುರುಷರಿಗೆ ಸಮನಾಗಿ ನಿಂತು ಅವರನ್ನು ನಾಚಿ ಸುವಷ್ಟು ಕಾರ್ಯಗಳಲ್ಲಿ ತೊಡಗಿ, ಯಶಸ್ವಿಗಳಾದರೆ ಖಡಾಖಂಡಿತವಾಗಿ ಹೆಣ್ಣು ಏತಕ್ಕೂ ಬಾರದವಳು, ಕೈಲಾಗದವಳು, ಅಬಲೆ — ಇತ್ಯಾದಿ ವಿಶೇಷಣಗ ಳಿಂದ ದೂರವಾಗಿ ಸರ್ವ ವಿಧದಲ್ಲೂ ಸಮರ್ಥಳೆ ನ್ನಿಸಿಕೊಳ್ಳುತ್ತಾಳೆ,

ಎಂ. ಶಶಿಕಲಾ

# ಅಕ್ಕ ಪಕ್ಕ

ಹೆಣ್ಣನ್ನು ಅತ್ಯಂತ ಕ್ರೂರವಾಗಿ ಹಿಂಸಿಸುವುದು ಹೆಣ್ಣೇ. ತಮ್ಮ ಸೊಸೆಯಂದಿರ ಮೇಲೆ ಸೀಮೆಎಣ್ಣೆ ಸುರಿದು ಬೆಂಕಿ ಹಚ್ಚುವಷ್ಟು ಪೈಶಾಚಿಕ ವರ್ತನೆಯನ್ನು ಗಂಡು ತೋರುವುದಿಲ್ಲ.

ಮಲ್ಲಿಕಾ ಸಾರಾಭಾಯಿ
ನೃತ್ಯಗಾತಿ

ಶ್ರೀಧರ್ (ಸುನಿಲ್) ಅವರ ಸಮಾಜಕಲ್ಯಾಣ ಚಟುವಟಿಕೆಗಳ ಬಗ್ಗೆ ನನಗೆ ಗೌರವವಿದೆ. ಆದರೆ ಅವರು ತಾವು ಈಗ ಹೀರೋ ಅಲ್ಲ ಎಂಬುದನ್ನು ನೆನಪಿಟ್ಟುಕೊಳ್ಳಬೇಕು.

ಉಮಾ ಭಾರತಿ

ಬಿ. ಜೆ. ಪಿ. ಎಂ. ಪಿ. (ನಾನು ಮಹಿಳೆಯರ ಆರಾಧಕ ಎಂಬ ಹೇಳಿಕೆ ಕುರಿತು)

ಯಜ್ಞೋಪವೀತ ಯಾವುದೇ ಜಾತಿ ಅಥವಾ ಧರ್ಮದ ಸಂಕೇತವಲ್ಲ. ಅದು ವಿದ್ಯೆಯ ಸಂಕೇತ. ಭಾರತದ ಅಪೂರ್ವಜ್ಞಾನ ಸಂಪತ್ತು ಎನಿಸಿರುವ ವೇದಗಳ ಅಧ್ಯಯನಕ್ಕೆ ಇರುವ ಅರ್ಹತೆಯ ಸಂಕೇತ, ವೇದಾಧ್ಯಯನ ಮಾಡ ಬಯಸುವ ಯಾವನೇ ಪುರುಷ ಅಥವಾ ಮಹಿಳೆ ಯಜ್ಞೋಪವೀತವನ್ನು ಧರಿಸಬಹುದು.

ಸ್ವಾಮಿ ಬ್ರಹ್ಮದೇವ್

ಬೆಂಗಳೂರಿನ ಆರ್ಯಸಮಾಜದ ಆಶ್ರಯದಲ್ಲಿ ನಡೆದ ಕುಮಾರಿ ಶ್ರದ್ಧಾ ಎಂಬ ಬಾಲಕಿಯ 'ಉಪನಯನ' ಕಾರ್ಯಕ್ರಮದ ಸಂದರ್ಭದಲ್ಲಿ)

ಅವಳಿಗೆ ಸಹಾಯ ಮಾಡಬೇಕೆಂಬುದು ನನ್ನ ದೃಢ ಸಂಕಲ್ಪ. ಇದಕ್ಕೆ ಮುಖ್ಯ ಕಾರಣ ಅವಳು ನನ್ನ ಜೀವನ ದೃಷ್ಟಿಯನ್ನೇ ಬದಲಾಯಿಸಿದಳು. ನನ್ನಂಥವರಲ್ಲಿ ಹೇರಳ ಸಂಪತ್ತಿದ್ದು ಧ್ಯೇಯರಹಿತ ಜೀವನ ನಡೆಸುತ್ತಿದ್ದೇವೆ. ಇಂದು ಅವಳ ಬದುಕನ್ನು ನೇರ್ಪಡಿಸಲು ನಾನು ಮುಂದಾಗಿದ್ದೇನೆ. ನಾಳೆ ಇಂಥ ಸಂದರ್ಭಗಳಲ್ಲಿ ಇನ್ನಷ್ಟು ಮಂದಿ ನನ್ನಂತೆಯೇ ಸ್ಪಂದಿಸಬಹುದು.

ಗಗನಸಖಿ ಅಮೃತಾ ಅಹ್ಲುವಾಲಿಯಾ

ಅರಬ್ ವೃದ್ಧನ 'ನವವಧು' ಬಾಲೆ ಅಮೀನಾಳನ್ನು ರಕ್ಷಿಸಿ ಅವಳನ್ನ ತನ್ನ ವಶಕ್ಕೆ ತೆಗೆದುಕೊಳ್ಳಲು ನಡೆಸಿರುವ ಪ್ರಯತ್ನ ಕುರಿತು ಪ್ರಶ್ನಿಸಿದಾಗ ( ದಿ ಇಂಡಿಪೆಂಡೆಂಟ್ ನಿಂದ)

ಸ್ತ್ರೀಯರು ಸಂಭಾಷಣೆ ಆರಂಭಿಸುವುದು ಏಕೆ ಗೊತ್ತೆ? ಪರಸ್ಪರ ಅರಿತುಕೊಳ್ಳಲಿಕ್ಕೆ ಹಾಗೂ ಅನ್ಯೋನ್ಯ ಸಂಬಂಧ ಅರಸಲಿಕ್ಕೆ. ಆದರೆ ಪುರುಷರು ಹಾಗಲ್ಲ. ತಮ್ಮ ಘನತೆಯನ್ನು ಒತ್ತಿ ಹೇಳುವುದಕ್ಕೆ ಅಥವಾ ಎತ್ತಿ ನಿಲ್ಲಿಸಲಿಕ್ಕಷ್ಟೇ ಸಂಭಾಷಣೆಗೆ ತೊಡಗುತ್ತಾರೆ.

ಭಾಷಾ ವಿಜ್ಞಾನಿ ಪ್ರೊ. ಡೆಬೊರಾ ಟ್ಯಾನೆನ್, "ನಾನು ಹೇಳಿದ್ದು ಆ ಅರ್ಥದಲ್ಲಲ್ಲ" ಎಂಬ ಗ್ರಂಥದಲ್ಲಿ 'ನ್ಯೂಸೈಂಟಿಸ್ಟ್' ನಲ್ಲಿ ಉದ್ಧೃತ.

...ಮಹಿಳೆಯರು ಯಾಕೆ ಒಳಗೆ ಸರಿದು ನಿಲ್ಲಲು ಇಷ್ಟಪಡುವುದಿಲ್ಲ ಎಂದು ವಿಚಾರಿಸುವುದಿಲ್ಲ. ನಾವು ಮಹಿಳೆಯರು ಗಂಡಸರನ್ನು ಕೇಳಿಕೊಳ್ಳುವುದು ಕೇವಲ ಇಷ್ಟೇ— "ನಿಮಗೆ ನಿಲ್ಲಲು ಶಕ್ತಿ ಇಲ್ಲದಿದ್ದರೆ ನೀವು ಮಹಿಳೆಯರಿಗೆ ಮೀಸಲಿಟ್ಟ ಆಸನದಲ್ಲಿ ಕುಳಿತುಕೊಳ್ಳಿ. ಆದರೆ ಬಸ್ಸಿನಲ್ಲಿ ನಿಲ್ಲಲು ದಯವಿಟ್ಟು ನಮಗೂ ಒಂದಿಷ್ಟು ಅವಕಾಶ ಕೊಡಿ" ಇದು ನಮ್ಮ ಸಮಾಜವಾದಿ ಗುರಿ ತೋರಿಸುತ್ತದೆ.

ರೀತಾ

ಪ್ರಜಾವಾಣಿ 'ವಾಚಕರ ವಾಣಿ' ಯಲ್ಲಿ(ಬಸ್‌ಗಳಲ್ಲಿ ಸ್ತ್ರೀಯರಿಗೆ ಸೀಟು ಬಿಡುವುದಿರಲಿ ನಿಲ್ಲಲೂ ಜಾಗ ಬಿಡುವುದಿಲ್ಲವೆಂಬ ಪತ್ರದಿಂದ)

ಚರಿತ್ರಕಾರರು ಮಹಿಳೆಯರ ಸಾಹಿತ್ಯವನ್ನು ಕಾಲುಪುಟದಲ್ಲಿ ಮುಗಿಸುತ್ತಾರೆ ಪ್ರಸಿದ್ಧವಾದ ಡಾ॥ ಕೀರ್ತಿನಾಥ ಕುರ್ತಕೋಟಿಯವರ ಸಾಹಿತ್ಯ ಮತ್ತು ಯುಗಧರ್ಮ ಕೃತಿಯೂ ಕೂಡ ಈ ಅಪವಾದದಿಂದ ಹೊರತಾಗಿಲ್ಲ. ಹೀಗಿರುವಾಗ ಸುಮಾರು 6—7 ದಶಕಗಳ ಕಾಲ ಸಾಹಿತ್ಯ ಸೇವೆಮಾಡಿ ಮೌಲಿಕ ಸಾಹಿತ್ಯ ಸೃಷ್ಟಿಸಿರುವ ಲೇಖಕಿಯೊಬ್ಬರು ಈ ಸಮ್ಮೇಳನಕ್ಕೆ(ಕ.ಸಾ.ಸ.) ಅಧ್ಯಕ್ಷರಾಗುವುದು ಸೂಕ್ತ.

ಚಿ. ನ. ಮಂಗಳಾ

ಪ್ರಜಾವಾಣಿ 'ವಾಚಕರ ವಾಣಿ' ಯಿಂದ

# ಸಮತಾ

"ಸಮತಾ" ಹಾಗೆಂದರೇನು? ಎಂಬ ಈ ಪ್ರಶ್ನೆ ಏಳುವುದು ಯಾರಿಗಾದರೂ ಸಹಜವೇ, ಅದೇನಾದರೂ ಇರಲಿ ಅದರ ಗೊಡವೆ ನಮಗೇಕೆ ಎಂದು ಉಪೇಕ್ಷೆಮಾಡುವ | ಕುತೂಹಲವಿರದ ಸಂದರ್ಭಗಳೆ ಹೆಚ್ಚೆಂದರು ಸರಿಯೆ, ಇಂತಹ ಗಮನಾರ್ಹ ವಿಚಾರವೊಂದು ಸಾಕಷ್ಟು ಜನರ ಗಮನಕ್ಕೆ ಬಾರದೆ ತೆರೆಯ ಮರೆಯಲ್ಲಿಯೇ ಉಳಿಯಬಾರದು ಎಂಬ ಆಶಯದಿಂದ ಮಾಡಿದ ಒಂದು ಕಿರು ಪ್ರಯತ್ನವೇ ಈ ಲೇಖನ,

"ಸಮತಾ" ಪ್ರಗತಿಪರ ಮಹಿಳಾ ವೇದಿಕೆ ಎಂಬ ವ್ಯವಸ್ಥೆಯೊಂದು ಆಡಂಬರಗಳ ಅಬ್ಬರವಿಲ್ಲದೆ ಎಲೆ ಮರೆಯ ಕಾಯಿಯ ಹಾಗೆ ಮೈಸೂರಿನ ಕುವೆಂಪು ನಗರದಲ್ಲಿ ಕಾರ್ಯ ನಿರ್ವಹಿಸುತ್ತಿದೆ. ಎಂಬುದು ಅಭಿಮಾನದ ವಿಚಾರ. ಇಲ್ಲಿ ಮಹಿಳಾ ವೇದಿಕೆ ಎಂದ ಕೂಡಲೇ ವ್ಯವಸ್ಥಿತವಾಗಿ ಕಟ್ಟುನಿಟ್ಟುಗಳಿಂದೊಡಗೂಡಿರುವ ಔಪಚಾರಿಕ ಸಂಸ್ಥೆಯಿರಬೇಕು ಎಂದು ಭಾವಿಸಲಾಗದು, ಇದಕ್ಕಾಗಿ ಪ್ರತ್ಯೇಕ ಕಟ್ಟಡ ಸಹ ಇಲ್ಲ, ಆಸಕ್ತರ ಮನೆಯೊಂದರಲ್ಲಿಯೇ ಪ್ರತಿ ಬುಧವಾರ ಸಂಜೆ ಸುಮಾರು ಎರಡು ಗಂಟೆಗಳ ಕಾಲ ಉದ್ಯೋಗಸ್ಥ ಮಹಿಳೆಯರು ಸಭೆ ಸೇರುತ್ತಾರೆ, ಇದರ ಸದಸ್ಯತ್ವಕ್ಕೆ ಯಾವುದೇ ನಿಯಮ ನಿಬಂಧನೆಗಳಿಲ್ಲ, ಸ್ತ್ರೀಯ ಪ್ರಗತಿಯ ಬಗೆಗೆ ಹೋರಾಡುವ ಮನೋಭಾವವುಳ್ಳ ಯಾರಾದರೂ ಇಲ್ಲಿನ ಸದಸ್ಯರಾಗಲು ಅರ್ಹರು, ಆದರೆ ಮೊದಲ ಆದ್ಯತೆ ಮಹಿಳೆಯರಿಗಾಗಿಯೇ ಎಂದರೆ ಪುರುಷರು ಸದಸ್ಯರಾಗಲೇಬಾರದು ಎಂದೇನೂ ಇಲ್ಲ. ಸಂಘದ ವಿಚಾರಗಳಿಗೆ ಸ್ಪಂದಿಸುವ ಮನಸ್ಸುಳ್ಳ ಸದಸ್ಯರಿಗೆ ಸ್ವಾಗತವೇ

ನಮ್ಮ ಸಮಸ್ಯೆಗಳೇ ಹಾಸಿಹೊದೆಯುಲಷ್ಟಿರುವಾಗ, ಬೇರೆಯವರ ಗೊಡವೆ ನಮಗೇಕೆ, ಅದರಿಂದಾಗಬೇಕಾದದ್ದಾದರೂ ಏನು? ಎಡಬಿಡದ ಜೀವನದ ಜಂಜಾಟಗಳೊಡನೆ ಅದಕ್ಕೆ ಸಮಯ, ತಾಳ್ಮೆಯಾದರೂ ಎಲ್ಲಿಂದ ಬಂದೀತು ಇತ್ಯಾದಿಯಾಗಿ ಯೋಚಿಸುವವರೇ ಹಲವರಿರುವ ನಮ್ಮಲ್ಲಿ ಪ್ರಾಂತಾಸಕ್ತಿ ಮನೋಭಾವ ತೀರಾ ಕಡಿಮೆ ಎಂದರೂ ನಡೆದೀತು, ಇದಕ್ಕೆ ಅಪವಾದವಾಗಿ ಸಮತಾ ನಡೆ ನಡೆಯುತ್ತಿದೆ,

ಮೊದಲೆ ಹೇಳಿದಂತೆ ಇಲ್ಲಿಯ ಸದಸ್ಯರೆಲ್ಲ ಹೆಚ್ಚಾಗಿ ಉದ್ಯೋಗಸ್ಥ ಮಹಿಳೆಯರು, ಗೃಹಿಣಿಯರು ಉದ್ಯೋಗದಲ್ಲಿರುವುದು ಬೇಡ ಮನೆಯಲ್ಲಿಯೇ ಇರುವ ಗೃಹಿಣಿಯರಿಗೆ ಸಹ ಮನೆಬಿಟ್ಟು ಹೊರಗೆ ಬರಲಾರದಷ್ಟು ಗೃಹಕೃತ್ಯದ ಬಂಧನಗಳಲ್ಲಿ ತಮ್ಮನ್ನು ತೊಡಗಿಸಿಕೊಂಡುಬಿಟ್ಟಿದ್ದಾರೆ. ಇನ್ನು ಉದ್ಯೋಗದಲ್ಲಿದ್ದೂ ಗೃಹಕೃತ್ಯಗಳನ್ನು ನೋಡಿಕೊಳ್ಳುವ ಜವಾಬ್ದಾರಿಯುಳ್ಳ ಮಹಿಳೆಯರಿಗಂತೂ ಸರಿಯಾಗಿ ಉಸಿರಾಡಲು ಸಹ ಸಮಯವಿರಲಾರದು ಅಂತಹದರಲ್ಲೂ ಸಹ ಇಲ್ಲಿಯ ಮಹಿಳೆಯರು ಇವೆರಡೂ ಕಾರ್ಯಗಳನ್ನು ನಿಭಾಯಿಸುವುದರ ಜೊತೆ ಜೊತೆಯಲ್ಲಿಯೇ ಸಮತಾ ವೇದಿಕೆಯು ಪ್ರಗತಿಪರ ಕಾರ್ಯಗಳನ್ನು ನಿರಂತರವಾಗಿ ಸಾಕಷ್ಟು ಯಶಸ್ವಿಯಾಗಿ ನಡೆಸಿಕೊಂಡು ಬರುತ್ತಿದೆ ಎಂದು ಹೇಳಿಕೊಳ್ಳುವುದೇ ಒಂದು ಹೆಮ್ಮೆಯ ವಿಚಾರ,

ಮಹಿಳಾ ಮಂಡಳಿಗಳೆಂದರೆ ತಕ್ಷಣ ಕೆಲಸಕ್ಕೆ ಬಾರದ ಕೀಳು ಹರಟೆ. ಅಡವೆ, ವಸ್ತ್ರ, ಅಲಂಕಾರ, ಮನರಂಜನೆ ಇಷ್ಟಕ್ಕೇ ಮುಗಿದು ಹೋಗುತ್ತದೆ— ಎಂದು ಭಾವಿಸಿರುವವರೇ ಹೆಚ್ಚು. ಇವಿಷ್ಟೇ ಅಲ್ಲದೆ ಮಹಿಳೆಯರ ಹಿತಚಿಂತನೆಗಳ ಬಗ್ಗೆ ಆಸಕ್ತಿವಹಿಸುವ ಶೋಷಣೆಯ, ದಬ್ಬಾಳಿಕೆಯ ಬಗ್ಗೆ ಸೊಲ್ಲೆತ್ತುವ ಸಂಘವೊಂದಿರಲು ಸಾಧ್ಯ ಎಂಬುದಕ್ಕೆ ಇದು ಸಾಕ್ಷಿ. ಇದು ಸುಮಾರು ೧೦–೧೨ ವರ್ಷಗಳಿಂದ ನಿರಂತರವಾಗಿ ಮಹಿಳೆಯರ ಏಳಿಗಾಗಿ ನಿಸ್ವಾರ್ಥ ಸೇವೆ ಸಲ್ಲಿಸುತ್ತಿರುವುದು ಗಮನಾರ್ಹ,

ಹಾಗಾದರೆ ಸಮತಾದ ಕಾರ್ಯಗಳೇನು ಎಂಬುದರ ಕಡೆಗೆ ಲಕ್ಷ್ಯ ಹರಿಸುವುದು ಅಗತ್ಯ. ದೈಹಿಕ

ವ್ಯತ್ಯಾಸವೊಂದರಿಂದ ಭಿನ್ನವಾದ ಮಾತ್ರಕ್ಕೆ ಯಾವ ಕ್ಷೇತ್ರದಲ್ಲಿಯೂ ಮಹಿಳೆಗೆ ಕೀಳರಿಮೆ ಸಲ್ಲದು. ಎಲ್ಲ ಕ್ಷೇತ್ರಗಳಲ್ಲಿ ಪುರುಷನಿಗೆ ಸರಿಸಮಾನಳಾಗಿ ಹೊರಗೆ ದುಡಿದರೆ ಮಾತ್ರ ಸಮಾನತೆ ಎಂದಲ್ಲ. ಮಾಡುವ ಕೆಲಸ ಗೃಹಕೃತ್ಯವಾದರೂ ಅವಳಿಗೆ ಸಿಗಬೇಕಾದ ಗೌರವ, ಮಾನ್ಯತೆ ದೊರೆಯಬೇಕಾಗಿದೆ. ಸಹಜವಾಗಿ ಹೆಣ್ಣಿನಲ್ಲಿ ಬೇರುಬಿಟ್ಟಿರುವ ಕೀಳರಿಮೆ ಮೊದಲು ತೊಲಗಬೇಕು ಎಂಬುದು ಇಲ್ಲಿನ ಸಂಘದ ಮೂಲೋದ್ದೇಶಗಳಲ್ಲಿ ಒಂದು. ಈ ರೀತಿಯ ಬಲವನ್ನು ನೀಡುವುದಕ್ಕಾಗಿ ವೇದಿಕೆ ಅವಿರತ ಶ್ರಮ ವಹಿಸುತ್ತಿದೆ.

ಇನ್ನು ವೇದಿಕೆ ಕೈಗೆತ್ತಿಕೊಂಡು ಪರಿಹಾರ ಕೊಟ್ಟ, ಕೊಡಲು ಪ್ರಯತ್ನಿಸಿದ ಪ್ರಕರಣಗಳು ಹಲವಾರು. ಸಮತಾ ವೇದಿಕೆಯು ನಡೆಸುತ್ತಿರುವ ಪತ್ರಿಕೆಯಲ್ಲಿ ದಾಖಲುಗೊಂಡ ವರದಿಯ ಪ್ರಕಾರ ೮೫ ೮೬ರಲ್ಲಿ ೪೩ ಪ್ರಕರಣಗಳಾದರೆ ೮೬–೮೭ರಲ್ಲಿ ೨೦ ಹಾಗೂ ೮೭ರಲ್ಲಿ ೧೮. ಇವುಗಳಲ್ಲಿ ಮುಖ್ಯವಾಗಿ ದ್ವಿಪತ್ನಿತ್ವ, ವರದಕ್ಷಿಣೆ, ವೈವಾಹಿಕ ಹಿಂಸೆ ಇತ್ಯಾದಿಯಾಗಿ ಸಮಸ್ಯೆಗಳನ್ನು ಕೈಗೆತ್ತಿಕೊಂಡು ಪರಿಹಾರದ ಮಾರ್ಗಕ್ಕಾಗಿ ಒಗ್ಗಟ್ಟಿನಿಂದ ಶ್ರಮವಹಿಸಿ ಪ್ರತಿಕೇಸನ್ನೂ ವಿವರಪೂರ್ಣವಾಗಿ ದಾಖಲಿಸುತ್ತದೆ.

ಗಂಡಿಗೊಂದೇ ಹೆಣ್ಣು ಎಂಬುದು ಹೇಳಿಕೆಗಳಲ್ಲಿ ಮಾತ್ರ. ಮೊದಲ ಪತ್ನಿಯಿದ್ದೂ ರಸಿಕ, ಸೌಂದರ್ಯೋಪಾಸಕ, ಸ್ವೇಚ್ಛಾಪರಲೋಲುಪನಾದ ಗಂಡು ಮರುವಿವಾಹವಾದರೆ ಮೊದಲ ಪತ್ನಿಯಾದ ಬಡ ಹೆಣ್ಣು ಮೊರೆ ಹೋಗುವುದು ಸಮತಾ ವೇದಿಕೆಯನ್ನು. ಸುಶಿಕ್ಷಿತರಿಂದ ತುಂಬಿದ ವೇದಿಕೆ ಕಾನೂನಿನ ಮೊರೆಹೊಕ್ಕು ಹೆಣ್ಣಿಗೆ ನ್ಯಾಯ ದೊರಕಿಸಿಕೊಡಲು ಹೋರಾಡುತ್ತದೆ. ಇದಕ್ಕಾಗಿ ಸಂಬಂಧಪಟ್ಟ ಮಂತ್ರಿಗಳ, ಅಧಿಕಾರಿಗಳ, ಕಾನೂನಿನ ಮೊರೆ ಹೋಗುತ್ತದೆ. ಎಲ್ಲ ಪ್ರಕರಣಗಳಲ್ಲೂ ಜಯ ಸ್ವತಃ ಸಿದ್ಧ ಎನ್ನಲಾಗದಿದ್ದರೂ ಮಾನವ ಪ್ರಯತ್ನ ಎಂಬಂತಿದೆ ಇವರ ಸಾಧನೆ.

ಇನ್ನು ವಿವಾಹದ ಸಮಯದಲ್ಲಿ, ವಿವಾಹದ ನಂತರ ನೂರಾರು ರೀತಿಯಲ್ಲಿ ವರದಕ್ಷಿಣೆಗಾಗಿ ಹಿಂಸಿಸುವ ಮಾರ್ಗಗಳನ್ನು ರೂಢಿಗತ ಮಾಡಿಕೊಂಡ ಕಾರಣ ಇದಕ್ಕೆ ಸಂಬಂಧಿಸಿದಂತೆ ಕೊಲೆಗಳು ಸರ್ವೇಸಾಮಾನ್ಯ. ಎಷ್ಟೋ ಕೊಲೆಗಳನ್ನು "ಸಹಜ ಸಾವು" ಎಂಬುದಾಗಿ ಸಾಬೀತು ಪಡಿಸುವಲ್ಲಿ ಚಾಣಾಕ್ಷವಾದ ಮನಸ್ಸು ಪ್ರಯತ್ನಿಸುತ್ತದೆ. ಈ ಹಿಂಸೆಯಲ್ಲಿ ಗಂಡಿನದೊಂದೇ ಅಲ್ಲದೆ ಹೆಣ್ಣಿನ ಕೈವಾಡವೂ ಇರುತ್ತದೆ. ಇಂತಹ ಕೊಲೆ ಪ್ರಕರಣಗಳನ್ನು ಬಯಲಿಗೆಳೆಯುವ ಮುಖಾಂತರ ಈ ದಿಕ್ಕಿನಲ್ಲಿ ಜನತೆ ಎಚ್ಚೆತ್ತುಕೊಳ್ಳುವುದಕ್ಕೆ ಕಿಂಚಿತ್ ಪ್ರಯತ್ನವನ್ನಾದರೂ ವೇದಿಕೆ ಹಮ್ಮಿಕೊಂಡಿದೆ.

ಇತ್ತದರಿ ಅತ್ತ ಪುಲಿ ಎಂಬಂತೆ ಬಿಡಲಾರದೆ, ಕಟ್ಟಿಕೊಳ್ಳಲಾಗದೆ ವೈವಾಹಿಕ ಹಿಂಸೆಯಲ್ಲಿ ನರಳುತ್ತಿರುವ ಹೆಣ್ಣು ಮಕ್ಕಳಿಗೆ ಸಮತಾದ ಕರುಣಾಹಸ್ತ ಸದಾ ಇದ್ದದ್ದೇ. ಒಳ್ಳೆಯ ರೀತಿಯಲ್ಲಿ ಗಂಡ ಅತ್ತೆ ಮಾವಂದಿರನ್ನು ಕರೆದು ಬುದ್ಧಿವಾದ ಹೇಳುವ, ಬಗ್ಗದಿದ್ದರೆ ಕಾನೂನಿನ ಬೆದರಿಕೆ ಹಾಕುವ ಗಂಡು ಕೆಲಸ ಮಾಡುತ್ತಿರುವಲ್ಲಿ ಹಿರಿಯಧಿಕಾರಿಗಳ ಗಮನಕ್ಕೆ ತರುವ ಇತ್ಯಾದಿ ಹಲವು ಹತ್ತು ರೀತಿಯಲ್ಲಿ ಸಮಸ್ಯೆಗಳನ್ನು ಪರಿಹರಿಸುವ ಮಾರ್ಗಗಳನ್ನು ಕಂಡುಕೊಳ್ಳುತ್ತಿದೆ ವೇದಿಕೆ.

ಸ್ತ್ರೀ ಪುರೋಭಿವೃದ್ಧಿಯ ಆಕಾಂಕ್ಷೆಯೊಂದನ್ನು ಬಿಟ್ಟು ಬೇರೆ ಯಾವ ಲಾಭಾಕಾಂಕ್ಷೆಯೂ ವೇದಿಕೆಗಿಲ್ಲ ಎಂದು ಬೇರೆ ಹೇಳಬೇಕಿಲ್ಲ. ಅನ್ಯರ ನೋವನ್ನು ತಾಳ್ಮೆಯಿಂದ ಆಲಿಸುವ ಚಿತ್ತ ಎಷ್ಟು ಜನರಿಗಿದ್ದೀತು? ಹೆಣ್ಣುಗಳ ನೋವುಗಳನ್ನು ಸಹನೆಯಿಂದ ಆಲಿಸಿ ಅದಕ್ಕೆ ಸ್ಪಂದಿಸುವ ಮನೋಭಾವ ವೇದಿಕೆಯ ಮೂಲಭೂತ ಗುಣ. ಒಂದು ಹೆಣ್ಣಿನ ಸಂಸಾರ ತಮ್ಮ ಪ್ರಯತ್ನದಿಂದ ನೆಟ್ಟಗೆ ನಿಂತರೆ ವೇದಿಕೆಗೆ ಆತ್ಮತೃಪ್ತಿ ದೊರೆಯುತ್ತದೆ. ಪರಹಿತಕಾರ್ಯದ ಮನಸ್ಥಿತಿಯೊಂದಿದ್ದರೆ ಸಮಯ, ಆತ್ಮಸ್ಥೈರ್ಯ ಹೇಗಾದರೂ ದೊರೆತೀತು ಎಂಬುದು ಇದರ ನಿಲುವು. ತಮ್ಮಲ್ಲಿಗೆ ಬಂದ ಹೆಣ್ಣು ಮಕ್ಕಳು ಸಾಕಷ್ಟು ಧೈರ್ಯ ತಂದುಕೊಂಡು ಜೀವನ ನಿಭಾಯಿಸುತ್ತಾರೆ ಎಂಬ ಧನ್ಯತಾ ಭಾವ ವೇದಿಕೆಗಿದೆ.

ಆಕಸ್ಮಿಕವೋ ಎಂಬಂತೆ ಒಮ್ಮೆ ಭೇಟಿ ಇತ್ತ

ನನಗೆ ಈ ಸಮತಾ ವೇದಿಕೆಯ ಉದ್ದೇಶಗಳು, ಪ್ರಯತ್ನಗಳು, ಕಾರ್ಯವೈಖರಿ ಅಚ್ಚರಿಗೊಳಿಸಿತು. ಸ್ವಹಿತಾಸಕ್ತಿಗಳ ಗೊಡವೆಯಿಲ್ಲದೆ ಹೀಗೊಂದು ಸಂಘ ಅನ್ಯ ಚಿಂತನೆಗಾಗಿ ಕಾರ್ಯೋನ್ಮುಖವಾಗಿರಬಲ್ಲದು ಎಂಬುದರ ಕಲ್ಪನೆಯೂ ಸಹ ಇಲ್ಲದವರಿಗೆ ಸಮತಾ ವೇದಿಕೆಯ ಬಗ್ಗೆ ಅರಿವುಂಟಾದಾಗ ಆಶ್ಚರ್ಯವಾಗುವುದು ಸಹಜವೇ.

ಒಟ್ಟನಲ್ಲಿ ತಮ್ಮ ಪ್ರಯತ್ನಗಳಿಂದ ಶೋಷಣೆಯನ್ನೇ ತಡೆಗಟ್ಟಬಲ್ಲೆವು. ಸಮಾನ ಅವಕಾಶಗಳನ್ನು ಕಲ್ಪಿಸಿಕೊಡಬಲ್ಲೆವು. ಆದರ್ಶವಾದ, ಸಮಾನತೆಯ ಸಮಾಜವೊಂದನ್ನು ಶೀಘ್ರದಲ್ಲಿಯೇ ನಿರ್ಮಿಸಿ ಭವಿಷ್ಯವನ್ನೇ ಬದಲಾಯಿಸಬಲ್ಲೆವು ಎಂಬ ಭ್ರಮೆ ಇಲ್ಲ. ಆದರೂ ಆ ದಿಕ್ಕಿನಲ್ಲಿ ಒಂದು ಆಶಾವಾದದ ಪ್ರಯತ್ನ. ಇಡೀ ಸಮಾಜದ ಶೋಷಣೆ ನಿಲ್ಲಿಸಲಾಗದಿದ್ದರೂ ತಮ್ಮ ಮೊರೆ ಹೊಕ್ಕ ಒಂದು ಹೆಣ್ಣಿನ ಬಾಳನ್ನಾದರೂ ಸುಗಮಗೊಳಿಸಬಲ್ಲೆವು ಎಂಬ ನಿಲುವಿನಿಂದ ಈ ವೇದಿಕೆ ಹೊರಟಿದೆ. ಅಲ್ಲದೆ ಯಾವ ಒಳ್ಳೆಯ ಕಾರ್ಯಗಳೂ ದಿಢೀರೆಂದು ಒಂದು ಸುಮುಹೂರ್ತದಲ್ಲಿ ಸಂಘಟಿತವಾಗಿ ಸಮಾಜ ಸ್ಥಿತಿಯನ್ನು ಬದಲಾಯಿಸಲಾರವು. ಆದರೂ ಜನತೆಯಲ್ಲಿ ಅರಿವನ್ನು ಮೂಡಿಸುವ ಪ್ರಯತ್ನಗಳೆಂದರೆ ಅನ್ಯಾಯದ ವಿರುದ್ಧ ಪ್ರತಿಭಟನಾ ಪ್ರದರ್ಶನ. ಪತ್ರಿಕೆಗಳ ಮುಖಾಂತರ ಜನಸಮೂಹಕ್ಕೆ ತಲುಪಿಸುವುದು, ಕಾನೂನಿನ ಗಮನಕ್ಕೆ ತರುವುದು ಇತ್ಯಾದಿ. ಸಮಾಜದ ವ್ಯವಸ್ಥೆಯೊಂದು ಬದಲಾಗುವುದು ಕ್ರಮ ಕ್ರಮೇಣವಾಗಿಯೇ ವಿನಹ ಇದ್ದಕಿದ್ದಂತೆ ಅಲ್ಲ. ಯಾವ ಪ್ರಯತ್ನವೂ ಇಲ್ಲದೆ ಬದಲಾವಣೆಯನ್ನು ಆಶಿಸುವುದು ಹೇಗೆ? ಪ್ರಯತ್ನವಿಲ್ಲದಿದ್ದರೆ ಶತಶತಮಾನಗಳಿಂದ ಇದ್ದ ವ್ಯವಸ್ಥೆ ಮುಂದೆ ಎಷ್ಟೋ ಶತಮಾನಗಳವರೆಗೆ ಮುಂದುವರೆದೀತು. ಹಾಗಾಗಲು ಎಚ್ಚೆತ್ತುಗೊಂಡ, ಅರಿವು ಮೂಡಿಸಿಕೊಂಡ ಮಹಿಳಾ ಮನಸ್ಸು ಬಿಡಬಾರದು ಎಂಬುದರ ದೃಢ ಸಂಕಲ್ಪ. ಅವಿರತ ಪ್ರಯತ್ನವೇ ಆದರ್ಶಣೀಯವಾದ ಸಮತಾ ವೇದಿಕೆಯದು.

ಪೂರ್ಣಿಮಾ.

---

ಓದುಗರಲ್ಲಿ ಮನವಿ

ಗಗನಕ್ಕೇರುತ್ತಿರುವ ಮುದ್ರಣ ಕಾಗದದ ಬೆಲೆ, ಅಂಚೆ ವೆಚ್ಚ ಮುಂತಾದವುಗಳಿಂದಾಗಿ ಪತ್ರಿಕೆಯನ್ನು ಪ್ರಕಟಿಸುವುದು ಕಷ್ಟಕರವಾಗಿದೆ. ಮಾನಸಕ್ಕೆ ಆಸಕ್ತಿ ಹಾಗೂ ಪ್ರೋತ್ಸಾಹ ವ್ಯಕ್ತಪಡಿಸಿ ಪತ್ರ ಬರೆಯುವ ಸಹೃದಯರು ಹಾಗೂ ಚಂದಾ ಮುಗಿದಿರುವ ಓದುಗರು ತಕ್ಷಣ ಚಂದಾಹಣ ಕಳಿಸಿದರೆ ಪತ್ರಿಕೆಯನ್ನು ಉಳಿಸಿ ಬೆಳೆಸಲು ನೀರೆರೆದು ಪ್ರೋತ್ಸಾಹಿಸಿದಂತಾಗುತ್ತದೆ. ಓದುಗರೆಲ್ಲರನ್ನು ಉಳಿಸಿಕೊಳ್ಳಬೇಕೆಂದು ನಮ್ಮ ಅಪೇಕ್ಷೆಯಾದರೂ ಉಚಿತವಾಗಿ ಒಂದು ಸಂಚಿಕೆಯನ್ನು ಕಳಿಸಲು ಉಂಟಾಗುವ ಖರ್ಚನ್ನು ಭರಿಸುವುದು ಪತ್ರಿಕೆಗೆ ಹೊರೆಯಾಗುತ್ತದೆ. ಪ್ರಿಯ ಓದುಗರು ಸಹಕರಿಸಿ ತಕ್ಷಣ 20-00 ರೂ ಚಂದಾ ಹಣ ಕಳಿಸಿಕೊಡಬೇಕೆಂದು ಕೋರುತ್ತೇನೆ.

ಸಂ. ಮಂ.

---

# ಬಿ. ಟಿ. ಎಸ್.ನಲ್ಲಿ ಮೀಸಲಾತಿ ಮತ್ತು ಸ್ತ್ರೀಯರು

ಚಂಪಾ, ಗೀತಾ

ಸೆಪ್ಟೆಂಬರ್ 1 ರಿಂದ ಜಾರಿಯಾದ ಬಿ. ಟಿ. ಎಸ್ ಬಸ್‌ನಲ್ಲಿ ಸ್ತ್ರೀಯರಿಗೆ ಮೀಸಲಾತಿ ಎಂಬ ಕಾನೂನು ಈ ನಾಲ್ಕು ತಿಂಗಳ ಹಂತದಲ್ಲಿ ಎಷ್ಟರ ಮಟ್ಟಿಗೆ ಸಾಫಲ್ಯತೆ ಪಡೆದಿದೆ ಎಂಬುದನ್ನು ಅವಲೋಕಿಸುವುದೇ ಈ ಲೇಖನದ ಉದ್ದೇಶ. ಗಗನಕ್ಕೇರುತ್ತಿರುವ ಅಕ್ಕಿ, ಬೇಳೆ, ತರಕಾರಿಯಂತಹ ಅವಶ್ಯಕ ವಸ್ತುಗಳ ಕುಸುಮಗಳನ್ನು ಮುಟ್ಟುವುದಕ್ಕಾಗಿಯೇ ಇಂದು ಮಧ್ಯಮ ವರ್ಗ, ಕೆಳವರ್ಗದ ಸಾವಿರಾರು ಹೆಂಗಸರು ದುಡಿಮೆಗಾರರಾಗಿರುವುದು ಸತ್ಯ. ಈ ಹೆಂಗಸರಿಗೆ ಬೆಳಗಾಗುವುದು 4 ಅಥವಾ 4–30 ಗೆಯೇ ತರಕಾರಿ, ಹೂವು ಮಾರುವವರು ಆರು ಘಂಟೆಗೇನೇ ಇವುಗಳನ್ನು ಮಾರುವುದಕ್ಕಾಗಿಯೋ ಅಥವಾ ತರುವುದಕ್ಕಾಗಿಯೋ ಬಿ. ಟಿ. ಎಸ್. ಗಳಿಗಾಗಿ ಆರು ಘಂಟೆ ಹೊಡೆಯುವ ಮುಂಚೆಯೇ ಕಾದಿರಬೇಕಾಗಿರುತ್ತದೆ. ಗಂಡನಿಗೆ, ಮಕ್ಕಳಿಗೆ ಬೆಳಿಗ್ಗೆಯ ತಿಂಡಿ ಅಥವಾ ಗಂಜಿ, ಮಧ್ಯಾಹ್ನದ ಊಟದ ಎಲ್ಲಾ ವಿವರಗಳನ್ನು ಸೂರ್ಯೋದಯಕ್ಕೆ ಮುಂಚೆ ಈ ಹೆಂಗಸರು ಯೋಚಿಸಬೇಕಾಗುತ್ತದೆ. ಸಂಬಳಕ್ಕಾಗಿ ಬೇರೆ–ಬೇರೆ ಆಫೀಸ್‌ಗಳಲ್ಲಿ ಕೆಲಸ ಮಾಡುವ ಮಧ್ಯಮವರ್ಗದ ಹೆಂಗಸರ ಬವಣೆಯೇನೂ ಇದಕ್ಕೆ ಹೊರತಲ್ಲ. ಆಫೀಸ್‌ಗಳಿಗೆ, ಕೆಲಸಕ್ಕೆ ಹೊರಡುವ ಮುಂಚೆಯೇ ದುಡಿಯುವ ಪ್ರತಿ ಹೆಂಗಸೂ ಕೂಡಾ ಮನೆ ಮನೆಯಲ್ಲಿ 2 ಘಂಟೆಗಳ ಕಾಲ ನಿಂತು, ಕೂತು' ಓಡಾಡಿ ಯಂತ್ರದ ತರಹ ಉಸಿರುಗಟ್ಟಿ ದುಡಿದು ತಿಂಡಿ, ಊಟ ಇತ್ಯಾದಿ ತನ್ನ 'ಹೆಣ್ತನದ' –ಕರ್ತವ್ಯಗಳನ್ನು ಮುಗಿಸಿಯೇ ಮನೆಯಿಂದ ಹೊರಡಬೇಕಾಗುತ್ತದೆ. ಹೀಗೆ 'ಉಸ್' ಎಂದು ಬಸ್‌ನಲ್ಲಿ ಹತ್ತಿದರೆ ಅಲ್ಲಿಯೂ ಹ್ಯಾಂಗರ್ ಹಿಡಿದುಕೊಂಡು ನೇತಾಡಬೇಕಾಗುತ್ತದೆ. ಇಂತಹ ಸಂದರ್ಭದಲ್ಲಿ ಮಹಿಳೆಯರಿಗೆ ಬಿ. ಟಿ. ಎಸ್. ನಲ್ಲಿ ಮೊದಲ ನಾಲ್ಕು ಸೀಟುಗಳನ್ನು ಕಾದಿರಿಸಿದಾಗ 'ಅಪ್ಪ, ಸಧ್ಯ ಮನೆಗೆಲಸ ಮುಗಿಸಿ ಉಸಿರುಗಟ್ಟಿ ದುಡಿದು ಹೋದಾಗ, ಕೊನೆಗೆ ಬಸ್‌ನಲ್ಲಾದರೂ ಕೂತುಕೊಂಡು, ಹಣ ತರುವ ದುಡಿಮೆಯನ್ನು ಪ್ರಾರಂಭಿಸುವ ಮೊದಲು ಸ್ವಲ್ಪ ರೆಸ್ಟ್ ತೆಗೆದುಕೊಳ್ಳಬಹುದು' – ಎಂದು ಬಹಳಷ್ಟು ದುಡಿಯುವ ಹೆಂಗಸರು ಸ್ವರ್ಗಕ್ಕೆ ಮೂರೇ ಗೇಣು ಎಂಬಷ್ಟು ಸಂತೋಷ ಪಟ್ಟದ್ದುಂಟು. ಎರಡೆರಡು ಕಡೆ ದುಡಿಮೆ ಮಾಡಬೇಕಾದ ಸ್ತ್ರೀಯರು ಸೆಪ್ಟೆಂಬರ್ 1 ಕ್ಕಾಗಿ ಕಾದು, ತಮ್ಮ ಬವಣೆಯ ಹೊರೆ ಕಡಿಮೆಯಾಗುತ್ತದೆ ಎಂದು ಕಾದದ್ದೂ ಉಂಟು. ಆದರೆ ಆಗಿದ್ದೇನು?

ಸೆಪ್ಟೆಂಬರ್ 1 ರಿಂದ 1 ವಾರದವರೆಗೆ ಈ ಕಾನೂನನ್ನು ಜಾರಿಗೊಳಿಸುವಲ್ಲಿ ಬಸ್ಸಿನ ಚಾಲಕರು, ನಿರ್ವಾಹಕರು ಪ್ರಯತ್ನಪಟ್ಟದ್ದೇನೋ ಉಂಟು ಅಷ್ಟೇ ಒಂದೇ ವಾರ. ಜಗಳ ಕಾದು ಸೀಟು ತೆಗೆದುಕೊಳ್ಳುವ ಹೆಂಗಸರಿಗೂ ಸುಸ್ತಾಗಿ, ಸಧ್ಯ ಮನೆ ಕೆಲಸ ಮುಗಿಸಿ, ರೆಸ್ಟ್ ತೆಗೆದುಕೊಳ್ಳುವ ಎಂದು ಯೋಚಿಸಿದರೆ ಈಗ ಜಗಳ ಬೇರೆ ಕಾಯಬೇಕಲ್ಲಪ್ಪಾ ಎಂದು ನಿಂತುಕೊಂಡು ಹೋಗುವುದೇ ವಾಸಿ ಎಂದು ನಿಂತುಕೊಂಡೇ ಪ್ರಯಾಣ ಮಾಡಬೇಕಾದ ಸ್ಥಿತಿಯೊದಗಿದೆ. ಚಾಲಕರು, ನಿರ್ವಾಹಕರೂ ಸಹ ಸುಸ್ತಾಗಿ ಹೆಂಗಸರಿಗೆ "ನೀವೇ ಸೀಟು ಕೇಳ್ರಮ್ಮಾ, ನಿಮಗೇ ರೈಟ್ ಇದೆ' ಎನ್ನುತ್ತಾ ಕುಳಿತಿರುವ ಗಂಡಸರು ಸೀಟು ಬಿಡದೇ ಅತ್ತಿತ್ತ ನೋಡುತ್ತಾ ಹಟ ಮಾಡುವುದನ್ನು ಗಮನಿಸುತ್ತಲೇ 'ರೈಟ್' ಹೇಳಿಬಿಡುತ್ತಾರೆ ನಾವು ಗಮನಿಸಿದ ಹಾಗೆ ಗಂಡಸರು ಬಹಳಷ್ಟು ಜನ ಸೀಟು ಬಿಡುವುದಿಲ್ಲ. ಸ್ತ್ರೀಯರ ಸೀಟುಗಳನ್ನು ಆವರಿಸಿದ ಅವರ ವರ್ತನೆಗಳು ಸಾಮಾನ್ಯವಾಗಿ ಈ ರೀತಿ ಇರುತ್ತದೆ.

(1) ಹೆಂಗಸರು ಬಸ್ಸಿನೊಳಗೆ ಬಂದಾಗ ಗಮನಿಸದಂತೆ ಎತ್ತ ಕಡೆಯೋ ನೋಡುವುದು

(2) 'ಸ್ತ್ರೀಯರ ಸ್ಥಳ' ಬಿಡ್ರಿ ಎಂದು ಕೇಳಿದರೆ ಕೇಳಿಸದಂತೆ ಸುಮ್ಮನೇ ಕೂತು ಮೀಸೆಯಿದ್ದರೆ ಮೀಸೆಯ ತುದಿಯಲ್ಲಿ ನಗುವುದು

(3) 'ಮುಂದೆ, ಮತ್ತೆ ಬೇರೆ ಸೀಟಲ್ಲಿ ಕುಂತಿಲ್ವಾ. ಅವರನ್ನೆಲ್ಲ ಎಬ್ಬಿಸಿಕೊಂಡು ಬನ್ರಿ ಆಮೇಲೆ ನಾವು ಏಳ್ತೀವಿ' ಎನ್ನುವುದು.

(4) "ಯಾರ‍್ರೀ ಸರ್ಕಾರ ಕಾನೂನು ಮಾಡಿರೋದು? ಅವರಿಗೆ ತಲೆ ಇದೆಯಾ? ನಾವೇನು ದುಡ್ಡು ಕೊಡದೇ ಪ್ರಯಾಣ ಮಾಡ್ತೀವಾ?" ಎನ್ನುವುದು.

(5) "ನಾವು ಸೀಟು ಬಿಡಲ್ಲ, ಏನ್ರೀ ಮಾಡ್ತೀರಾ? ಬೇರೆ ಹೆಂಗಸರೆಲ್ಲ ಸುಮ್ಮನೆ ನಿಂತು ಕೊಂಡಿಲ್ವಾ? ನಿಮ್ಮದೇನು ತಲೆಹರಟೆ? ಸುಮ್ಮನೇ ನಿಂತುಕೊಳ್ರಿ "— ಇತ್ಯಾದಿ

ಇದಕ್ಕೆ ಸರಿಯಾಗಿ ಮುಕ್ಕಾಲು ವಾಸಿ ಸ್ತ್ರೀಯರು ಸ್ಥಳ ಕೇಳುವ ತಂಟೆಗೆ ಹೋಗದೇ ತಾವು ಶತಮಾನಗಳಿಂದ ಮೌನವನ್ನು ಬಳುವಳಿ ಪಡೆದವರು. ಶಾಂತಿ ಪ್ರಿಯರು. ಸಹನವಂತರು ಎಂಬುದನ್ನು ಸಾಧಿಸಿ ಬಿಡುತ್ತಾರೆ ಸ್ಥಳ ಕೇಳಿ

ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀಮತಿ ಲಲಿತಾ ನಾಯಕ್, ಇವರು ನಿಯಮ 310ರ ಅಡಿಯಲ್ಲಿ ಕೊಟ್ಟಿರುವ ವಿಚಾರದಲ್ಲಿ ಮಾನ್ಯ ಸಾರಿಗೆ ಸಚಿವರ ಹೇಳಿಕೆ:

ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯು ದಿನಾಂಕ ೧-೯-೧೯೯೧ ರಿಂದ ಜಾರಿಗೆ ಬರುವಂತೆ ಎಲ್ಲಾ ನಗರ ಮತ್ತು ಹೊರ ವಲಯ (ಸಬರ್ಬನ್) ಸಾರಿಗೆ ಬಸ್ಸುಗಳಲ್ಲಿ ಮುಂಭಾಗದ ಎಡಭಾಗದ ಬದಿಯ ನಾಲ್ಕು ಸಾಲುಗಳ ಆಸನಗಳನ್ನು ಮಹಿಳೆಯರಿಗಾಗಿಯೇ ಮೀಸಲಿರಿಸಿದೆ. ಇತರ ಪ್ರಯಾಣಿಕರು ಈ ಆಸನಗಳನ್ನು ಆಕ್ರಮಿಸಿಕೊಂಡಿದ್ದರೆ ಅವನ್ನು ಬಿಟ್ಟು ಕೊಡುವಂತೆ ಬಸ್ಸಿನ ಸಿಬ್ಬಂದಿಯವರು ತಪ್ಪದೆ ಕ್ರಮ ಕೈಗೊಳ್ಳುವಂತೆ ಸಂಸ್ಥೆಯು ಸುತ್ತೋಲೆ ಸಂಖ್ಯೆ ೫೧೮೩ | ದಿನಾಂಕ ೨-೯-೯೧ ರ ಮೂಲಕ ಎಲ್ಲಾ ವಿಭಾಗಗಳಿಗೂ ತಿಳಿಸಿರುತ್ತದೆ. ಹಾಗೂ ಬಸ್ಸುಗಳಲ್ಲಿ ಈ ನಿಗದಿತ ಆಸನಗಳ ಹತ್ತಿರ ಸ್ತ್ರೀಯರಿಗೆ ಮಾತ್ರ ಅಥವಾ ಮಹಿಳೆಯರಿಗೆ ಮಾತ್ರ ಎಂಬ ಬರಹಗಳನ್ನು ಬರೆಸಲಾಗಿದೆ.

ಈ ಸೂಚನೆಯನ್ನು ಪಾಲಿಸದೆ ಇರುವ ಪುರುಷರಿಗೆ ನಿರ್ವಾಹಕರು ವಿನಯದಿಂದ ಸೀಟು ಬಿಟ್ಟುಕೊಡಲು ಕೇಳಿಕೊಳ್ಳಬೇಕು. ಹಾಗೆ ಬಿಟ್ಟು ಕೊಡದಿರುವ ಪಕ್ಷದಲ್ಲಿ ಅಂತಹ ಪುರುಷರ ಮೇಲೆ ಕಾಯಿದೆಯ ನಿಯಮ ೯೨ರ ಪ್ರಕಾರ ಸಾರ್ವಜನಿಕ ವಾಹನಗಳಲ್ಲಿ ಅಸಭ್ಯ ರೀತಿಯಿಂದ ವರ್ತಿಸಿದ್ದಕ್ಕಾಗಿ ಮೊಕದ್ದಮೆ ಹೂಡಬಹುದು. ಅಲ್ಲದೆ ಮೋಟಾರು ವಾಹನ ಕಾಯಿದೆಯ ಕಲಮು ೧೭೭ ರ ಪ್ರಕಾರ ಮತ್ತು ಕರ್ನಾಟಕ ಮೋಟಾರು ವಾಹನ ಕಾಯಿದೆಯ ನಿಯಮಗಳ ಪ್ರಕಾರ ಮೀಸಲಾತಿಯನ್ನು ಉಲ್ಲಂಘಿಸಿದ್ದಲ್ಲಿ ಮೊಕದ್ದಮೆ ಹೂಡಬಹುದು. ಈ ಮೊಕದ್ದಮೆಯಲ್ಲಿ ಅಸಭ್ಯ ರೀತಿಯಿಂದ ವರ್ತಿಸಿದ್ದಕ್ಕಾಗಿ ಅಥವಾ ಆಸನಗಳ ಮೀಸಲಾತಿ ನಿಯಮವನ್ನು ಉಲ್ಲಂಘಿಸಿದ್ದಕ್ಕಾಗಿ ನೂರು ರೂಪಾಯಿಗಳ ದಂಡವನ್ನು ವಿಧಿಸಬಹುದು.

ಬೆಂಗಳೂರು ನಗರದಲ್ಲಿ ಮಹಿಳೆಯರಿಗಾಗಿ ಮಾಡಿದ ಆಸನ ಮೀಸಲಾತಿ ನಿಯಮವನ್ನು ಸಾಕಷ್ಟು ಉಲ್ಲಂಘಿಸುತ್ತಿರುವುದು ನಿಗಮದ ಗಮನಕ್ಕೆ ಬಂದಿದೆ. ಅಲ್ಲದೆ ಹಲವಾರು ನಿರ್ವಾಹಕರು ಮಹಿಳೆಯರಿಗೆ ಸಹಕಾರ ಕೊಡದೇ ನಿಂತು ನೋಡುತ್ತಿರುವುದೂ ಸಹ ನಿಗಮದ ಗಮನಕ್ಕೆ ಬಂದಿದೆ. ಈ ಮೀಸಲಾತಿ ಕ್ರಮವನ್ನು ಸಕ್ರಮವಾಗಿ ಜಾರಿಗೊಳಿಸಲು ನಿರ್ವಾಹಕರು ಮತ್ತು ಚಾಲಕರಿಗೆ ಎರಡು ಗಂಟೆಗಳ ಕಾಲ ಬಿ. ಟಿ. ಎಸ್. ನ ಎಲ್ಲಾ ಘಟಕಗಳಲ್ಲಿ ತರಬೇತಿಯನ್ನು ಕೊಡುವ ಕಾರ್ಯಕ್ರಮವನ್ನು ಜಾರಿಗೊಳಿಸಲಾಗುತ್ತಿದೆ. ಆದರೂ ಕಾನೂನಿನಿಂದ ಮಾತ್ರ ಈ ಆಸನ ಮೀಸಲಾತಿಯನ್ನು ಜಾರಿಗೊಳಿಸುವುದು ಕಷ್ಟಕರವಾದ ಕೆಲಸ. ನಮ್ಮ ಪುರುಷ ಪ್ರಯಾಣಿಕರಲ್ಲಿ ಮಹಿಳಾ ಪ್ರಯಾಣಿಕರ ಬಗ್ಗೆ ಒಳ್ಳೆಯ ಸಂಸ್ಕೃತಿ ಬೆಳೆಯುವುದು ಅಗತ್ಯ.

ಪ್ರಯಾಣಿಕರಿಂದ ನಿರ್ದಿಷ್ಟ ದೂರುಗಳು ಅಸಹಕಾರದ ಬಗ್ಗೆ ಬಂದಲ್ಲಿ ಶಿಸ್ತಿನ ಕ್ರಮ ಕೈಗೊಳ್ಳಲಾಗುವುದು. ಸಿಬ್ಬಂದಿ ವರ್ಗಕ್ಕೂ ಕೂಡ ಬೆಂಗಳೂರು ನಗರ ಸಾರಿಗೆಯಲ್ಲಿ ಪ್ರಯಾಣಿಕರೊಂದಿಗೆ ಸೌಜನ್ಯತೆಯಿಂದ ನಡೆದುಕೊಳ್ಳುವ ಬಗ್ಗೆ ತರಬೇತಿಯನ್ನು ಸಹ ನೀಡಲಾಗುತ್ತಿದೆ.

ಸಹಿ -
ಸಾರಿಗೆ ಸಚಿವರು.

ಅಶ್ಲೀಲ ಬೈಗಳನ್ನು ಅಧಿಕಾರವಾಗಿ ಮಾಡಿಕೊಂಡು ಸ್ತ್ರೀಯರು ಇಬ್ಬಗೆಯ ದುಡಿಶದ ಹಂತದಲ್ಲಿ ಸಹಾಯಕವಾಗುವಂತಹ ಹಲವು ಕಾನೂನುಗಳಿಗೂ ಮಣ್ಣು ಮುಕ್ಕಿಸುವ ಪ್ರಯತ್ನ ನಡೆಯುತ್ತದೆ.

ಈಗಲೂ ಹಾಗಾದುದರಿಂದಲೇ 'ಮೊಸಲಾತಿ' ಆಜ್ಞೆ ಜಾರಿಗೆಯಾದ ಕೆಲವೇ ದಿನಗಳಲ್ಲಿ ವಿಶೇಷ ಜಾಗೃತ ದಳವನ್ನು ರಚಿಸಬೇಕಾಯ್ತು (ಪು: 20 ರ ಬಾಕ್ಸ್ ನೋಡಿ).

ವಿಶೇಷ ಜಾಗೃತಾ ದಳ ಇದ್ದಕ್ಕಿದ್ದಂತೆ ಬಿ. ಟಿ. ಎಸ್ ಬಸ್‌ಗಳಿಗೆ ಭೇಟ ನೀಡಿ ಮೊಸಲಾತಿಯನ್ನು ಸರಿಯಾಗಿ ಪಾಲಿಸಲಾಗುತ್ತಿದೆಯೋ ಇಲ್ಲವೇ ಎಂಬುದನ್ನು ಪರೀಕ್ಷಿಸಿ, ಪಾಲಿಸದಿದ್ದ ಪ್ರಯಾಣಿಕನಿಗೆ ದಂಡ ಹಾಕುತ್ತದೆ. ಇದು ಸರ್ಕಾರದ ಆದೇಶ. ಆದರೆ ಇದೂ ಸಹ ಒಂದೆರಡು ದಿನಗಳ ಮಟ್ಟಿಗೆ ನಡೆದಿದ್ದಿರಬಹುದು. ಪ್ರಾರಂಭದ ಕೆಲ ದಿನಗಳು ಬಸ್‌ಗಳಿಗೆ ಜಾಗೃತ ದಳ ಭೇಟಿ ಕೊಟ್ಟು ದಂಡ ಹಾಕಿದ ಬಗ್ಗೆ ದಿನ ಪತ್ರಿಕೆಗಳಲ್ಲಿ ಪ್ರಕಟವಾಯ್ತು. ಸಾರ್ವಜನಿಕರಿಗೂ ಒಂದೆರಡು ಘಟನೆಗಳು ಕಣ್ಣಿಗೆ ಬಿದ್ದಿರಬಹುದು. ಈಗ ಸ್ವಲ್ಪ ಹಳೆಯದಾಯಿತಲ್ಲ, ಹಾಗಾಗಿ ಹೆಂಗಸರು ನಿಂತುಕೊಂಡೇ ಪ್ರಯಾಣಿಸುತ್ತಾರೆ. ಕುಳಿತ ಗಂಡಸರಲ್ಲಿ ಬಹಳ ಮಂದಿ ಅದನ್ನು ನೋಡಿಯೂ ನೆಮ್ಮದಿಯಿಂದ ಕುಳಿತೇ ಇರುತ್ತಾರೆ. ಮೊಸಲಾತಿಯ ಬಗ್ಗೆ ಮಾತನಾಡುವವರೂ ಇಲ್ಲ. ಅದನ್ನು ಪರೀಕ್ಷಿಸುವ ವಿಶೇಷ ತನಿಖಾ ದಳವೂ ಇಲ್ಲ.

'ಬಿಡಿ, ಬಿಡಿ ಎರಡ್‌ದಿವ್ಸ ಗೌರ್ಮೆಂಟ್ ಬಡ್ಕೊಳತ್ತೆ, ಈ ಹೆಂಗಸ್ರೂ ಗಲಾಟೆ ಮಾಡ್ತಾರೆ. ಬರ್ತಾ ಬರ್ತಾ ಎಲ್ಲಾ ಸರಿಹೋಗತ್ತೆ. ಇವೆಲ್ಲಾ ಎರಡ್‌ದಿವ್ಸ. ಸಾವ್ ಬಗ್ಗದಿದ್ರೆ ಅಯ್ತು' ಎಂದು ವಿದ್ಯಾರ್ಥಿಯೊಬ್ಬ ಗಟ್ಟಿಯಾಗಿ ಹೇಳುತ್ತಿದ್ದ ಒಂದು ದಿನ. ಉಳಿದ ಪ್ರಯಾಣಿಕರಲ್ಲಿ ಸ್ತ್ರೀಯರೂ ಸೇರಿದಂತೆ ಯಾರೂ ವಿರೋಧಿಸಿದವರಿರಲಿಲ್ಲ. ಬದಲಿಗೆ ಬೇರೆ ನಾಲ್ಕೈದು ಮಂದಿ ಗಂಡಸರು ನಗುತ್ತಾ ತಲೆಯಾಡಿಸಿದ್ದರು. ಸ್ತ್ರೀಯರಿಗೆ 'ತರಲೆಗಳ ಸಹವಾಸ' ದಿಂದ ದೂರವಿರುವುದು ಒಳ್ಳೆಯದು ಎನಿಸಿದ್ದರೆ, ಪುರುಷರಲ್ಲಿ ತಮಗೆ ಅನುಕೂಲವಾದ್ದ ಮಾತಾದುದರಿಂದ ಸುಮ್ಮನಿದ್ದವರು ಕೆಲವರಾದರೆ, ಮತ್ತೆ ಕೆಲವರಿಗೆ ಸ್ತ್ರೀಯರ ಪರ ಮಾತನಾಡಿದರೆ ತಮ್ಮ ಬಗ್ಗೆ ಏನಾದರೂ ಕತೆ ಕಟ್ಟಿದರೆ? ಎಂಬ ಹಿಂಜರಿಕೆ. ಏಕೆಂದರೆ ಕೆಲವೇ ದಿನಗಳ ಹಿಂದೆ ಯಾರೋ ಒಬ್ಬ ಹೆಂಗಸಿಗೆ ಸೀಟು ಬಿಟ್ಟು ಕೊಡಲು ಆ ಹೆಂಗಸಿನ ಪರವಾಗಿ ಮಾತನಾಡಿದ ಪುರುಷ ಪ್ರಯಾಣಿಕನಿಗೆ 'ನಿಂಗೂ ಆಯಮ್ಮಂಗೂ 'ಏನ್ ಸಂಬಂಧ? ಭಾಳ ವಹಿಸ್ಕೊಂಡು ಬರ್ತಿದೀಯಲ್ಲ ಏನ್ ಸಮಾಚಾರ?" ಎಂಬಿತ್ಯಾದಿ ಕೆಟ್ಟ ಪ್ರಶ್ನೆಗಳು ಎದುರಾಗಿದ್ದವು. ಈ ರೀತಿಯಲ್ಲ ಆಲೋಚಿಸುವವರಿಗೆ ತಮ್ಮ ವರ್ತನೆ ಸರಿ ಎಂದು ಹೇಗೆ ಅನಿಸುತ್ತದೆಯೋ ತಿಳಿಯದು. ಕೇವಲ ಸೀಟು ಬಿಟ್ಟು ಕೊಟ್ಟರೇ ತಮಗೆ ಅವಮಾನ ಎಂದು ಭಾವಿಸುವ ಈ ಮಂದಿ ತಮ್ಮೊಂದಿಗೆ ಸಹಜೀವಿಗಳಾಗಿರುವ, ತಮ್ಮಷ್ಟೇ ಬದುಕುವ ಹಕ್ಕು ಹೊಂದಿರುವ ಮಹಿಳೆಯರಿಗೆ ಕೂರಲು ಸ್ಥಳವಿಲ್ಲವೆಂಬ ಕಾರಣಕ್ಕಾಗಿ ಸೀಟಿನ ಮೊಸಲಾತಿ ಅದನ್ನು ಪರೀಕ್ಷಿಸಲು ವಿಶೇಷ ದಳ ರಚನೆ ಇವೆಲ್ಲವೂ ತಮ್ಮ ನೈತಿಕತೆಯನ್ನು ಅಳೆಯುವ ಅಳತೆಗೋಲು ಎಂದೇಕೆ ಭಾವಿಸರು? ಅವಮಾನ ಎಂದೇಕೆ ತಿಳಿಯುವುದಿಲ್ಲ.

---

## ವರದಕ್ಷಿಣೆ, ಮಾನಭಂಗ......ಇತ್ಯಾದಿ

ಭಾರತದಲ್ಲಿ ಒಟ್ಟು 2448 ವರದಕ್ಷಿಣೆ ಸಾವು, 5916 ಮಾನಭಂಗ ಹಾಗೂ ಅತ್ಯಾಚಾರ ಯತ್ನ, 7116 ಅಪಹರಣ ಪ್ರಕರಣಗಳು ಮಹಿಳೆಯರ ವಿರುದ್ಧ ನಡೆದ ಅಪರಾಧಗಳಲ್ಲಿ ಮುಖ್ಯವಾದವುಗಳಾಗಿವೆ. ಈ ವಿಷಯವನ್ನು ಲೋಕ ಸಭೆಯಲ್ಲಿ ಗೃಹ ಖಾತೆ ರಾಜ್ಯ ಸಚಿವ ಎಂ. ಎಂ. ಜೇಕಬ್ ಅವರು ತಿಳಿಸಿದ್ದಾರೆ. ಉತ್ತರ ಪ್ರದೇಶದಲ್ಲಿ ಹೆಚ್ಚು ವರದಕ್ಷಿಣೆ ಸಾವುಗಳು ಸಂಭವಿಸಿದ್ದು ವರದಕ್ಷಿಣೆ ಸಾವಿನ ವಿಷಯದಲ್ಲಿ ಮುಂಚೂಣಿಯಲ್ಲಿದೆ, 1152 ಪ್ರಕರಣಗಳು ದಾಖಲಾಗಿವೆ. ನಂತರದ ಸ್ಥಾನಗಳು ಮಹಾರಾಷ್ಟ್ರ—568 ಮತ್ತು ಆಂಧ್ರ ಪ್ರದೇಶ—305 ವರದಕ್ಷಿಣೆ ಸಾವು ಸಂಭವಿಸಿವೆ ಮಾನಭಂಗ ಪ್ರಕರಣಗಳು ಮಧ್ಯ ಪ್ರದೇಶದಲ್ಲಿ ಅತಿ ಹೆಚ್ಚು— 53 ಪ್ರಕರಣಗಳು. ಉತ್ತರ ಪ್ರದೇಶದಲ್ಲಿ 922 ಹಾಗೂ ಬಿಹಾರದಲ್ಲಿ 403 ಮಾನಭಂಗ ಪ್ರಕರಣಗಳು ನಡೆದಿವೆ.

---

## ಓದುಗರಲ್ಲಿ ಮನವಿ

ಸುಮಾರು ಐದಾರು ತಿಂಗಳುಗಳಿಂದ ನಮ್ಮ ಓದುಗರಿಗೆ 'ಮಾನಸ' ಸಂಚಿಕೆಯನ್ನು ಕಳಹಿಸಲಾಗಲಿಲ್ಲ. ಕೆಲವು ತಾಂತ್ರಿಕ ಅಡಚಣೆಗಳಿಂದಾಗಿ ಪತ್ರಿಕೆ ಪ್ರಕಟವಾಗಲಿಲ್ಲ. ಇದನ್ನು ಪತ್ರದ ಮೂಲಕವೂ ನಮ್ಮೆಲ್ಲ ಓದುಗರಿಗೆ ತಿಳಿಸಿದ್ದೇವೆ. ಇನ್ನು ಮುಂದೆ "ಮಾನಸ" ಕ್ರಮವಾಗಿ ಬರಲಿದ್ದು, ಪ್ರತಿ ತಿಂಗಳ ಮೊದಲ ವಾರದಲ್ಲೇ ನಿಮ್ಮ ಕೈ ಸೇರಲಿದೆ. ವಾರ್ಷಿಕ ಚಂದಾದಾರರಿಗೆ ಒಂದು ವರ್ಷದ ಅವಧಿಯಲ್ಲಿ ಈಗ ಎಷ್ಟು ಸಂಚಿಕೆಗಳು ಕಡಿಮೆಯಾಗಿದೆಯೋ ಅಷ್ಟು ಸಂಚಿಕೆಗಳನ್ನು ಕಳುಹಿಸಲಾಗುವುದು. ಆತ್ಮೀಯ ಓದುಗರು ಬೇಸರಿಸದೆ, ಮುನ್ನಿನಂತೇ ಪ್ರೋತ್ಸಾಹ, ಬೆಂಬಲ ನೀಡಬೇಕೆಂದು ಆಶಿಸುತ್ತೇವೆ.

ಸಂ. ಮಂ.

ಸಂಪಾದಕರು, ಪ್ರಕಾಶಕರು ಹಾಗೂ ಮುದ್ರಕರು ಎಚ್. ಎಸ್. ರಾಜೇಶ್ವರಿ, ಮಾನವಿ ಮುದ್ರಣಾಲಯ,
ಪಂಚಾಯಿತಿ ರಸ್ತೆ, ಕಾಡುಗೋಡಿ ಅಂಚೆ, ಬೆಂಗಳೂರು—೫೬೦೦೬೭

REGD No KRNA271

# ಮಾನಸ

ಮಹಿಳೆಯರ ಮೇಲೆ ನಡೆಯುವ ಅಮಾನವೀಯ ದೌರ್ಜನ್ಯ, ಹಿಂಸೆಗಳನ್ನು ಬೆಳಕಿಗೆ ತರುವುದಕ್ಕಾಗಿ.

ಶೋಷಿತ ವ್ಯವಸ್ಥೆಯನ್ನು, ಅದರ ವಿವಿಧ ರೂಪಗಳನ್ನು ಗುರುತಿಸುವುದಕ್ಕಾಗಿ

ಮಹಿಳೆಯರೊಂದಿಗೆ ಆತ್ಮೀಯ ಅರ್ಥಪೂರ್ಣ ಸಂವಾದಕ್ಕಾಗಿ.

ಮಹಿಳಾ ಆಂದೋಲನದ ಹೊಸ ದಿಕ್ಕುಗಳ ಹುಡುಕಾಟಕ್ಕಾಗಿ.

PRINTED MATTER




M/s C. G. Manjula
9, 3rd Cross
Markham Road
Ashoka Nagar
Bangalore-560025

ವಿಳಾಸ : "ಮಾನಸ"
ಪಂಚಾಯಿತಿ ರಸ್ತೆ
ಕಾಡುಗೋಡಿ
ಬೆಂಗಳೂರು—560067